8] ಸಹಕಾರ ಚಳುವಳಿಯ ಯಶಸ್ಸಿಗೆ ಇಲಾಖೆಯು ಸ್ನೇಹಿತ, ದಿಗ್‍ದರ್ಶಕ, ಹಾಗೂ ಮಾರ್ಗದರ್ಶಕರಂತೆ ಕೆಲಸ ನಿರ್ವಹಿಸುವುದು.

9] ಸಹಕಾರ ಸಂಘಗಳು ಸಹಕಾರ ಕಾಯ್ದೆ ಮತ್ತು ನಿಯಮಗಳನ್ವಯ ಕಾರ್ಯನಿರ್ವಹಿಸುವಂತೆ ನಿಯಂತ್ರಿಸುವುದು.

10] ಅಗತ್ಯವಿರುವ ಸಹಕಾರ ಸಂಘಗಳಿಗೆ ಸಹಕಾರ ಇಲಾಖೆಯ ಅಧಿಕಾರಿ/ಸಿಬ್ಬಂದಿಗಳನ್ನು ನಿಯೋಜನೆ ಮಾಡುವುದು.

11] ಸಂಘ ಸಂಸ್ಥೆಗಳ ನೊಂದಣಿಕಾಯ್ದೆ 1960ರನ್ವಯ ನೊಂದಣಿ, ನವೀಕರಣ, ಬೈಲಾ ತಿದ್ದುಪಡಿ, ಶುಲ್ಕ ವಸೂಲಾತಿ ದೂರು ಅರ್ಜಿ ಇತ್ಯಾದಿ.

12] ಸಹಕಾರಿ ರೈತ ಸದಸ್ಯರು ಹಾಗೂ ಅವರ ಕುಟುಂಬ ವರ್ಗದವರನ್ನು ಈ ಯೋಜನೆಯಡಿ ನೊಂದಾಯಿಸುವುದು ಅವರುಗಳಿಗೆ ಸರ್ಕಾರಿ ಹಾಗೂ ಯಶಸ್ವಿನಿ ನೆಟವರ್ಕ್ ಆಸ್ಪತ್ರೆಗಳ ಮೂಲಕ ಚಿಕಿತ್ಸೆ ಕೊಡಿಸುವುದು.

**ಜಿಲ್ಲೆಯಲ್ಲಿ ಸಹಕಾರ ಇಲಾಖೆಯ ಸಾಂಸ್ಥಿಕ ರಚನೆ ಸಹಕಾರ ಸಂಘಗಳ ಉಪನಿಬಂಧಕರು ಕೊಡಗು ಇವರ ಅಧೀನದಲ್ಲಿ ಕೆಳಕಂಡಂತೆ ಕಾರ್ಯನಿರ್ವಹಿಸುವ ಸಿಬ್ಬಂದಿಗಳು ಇರುತ್ತಾರೆ.**

1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೊಡಗು, ಮಡಿಕೇರಿ.

ಸಹಕಾರ ಸಂಘಗಳ ಉಪನಿಬಂಧಕರಿಗೆ, ಕಛೇರಿಯ ಮತ್ತು ಕ್ಷೇತ್ರ ಕೆಲಸಗಳ ನಿರ್ವಹಣೆಗಾಗಿ ಕೆಳಕಂಡಂತೆ ಸಿಬ್ಬಂದಿಗಳು ಕಾರ್ಯ ನಿರ್ವಹಿಸುತ್ತಿದ್ದಾರೆ.

1] ಸಹಕಾರ ಅಭಿವೃದ್ಧಿ ಅಧಿಕಾರಿಗಳು.
2] ಕಛೇರಿ ಅಧೀಕ್ಷಕರು.
3] ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು.
4] ಸಹಕಾರ ಸಂಘಗಳ ನಿರೀಕ್ಷಕರು.
5] ಪ್ರಥಮ ದರ್ಜೆ ಸಹಾಯಕರು.
6] ಶೀಘ್ರಲಿಪಿಗಾರರು.
7] ದ್ವಿತೀಯ ದರ್ಜೆ ಸಹಾಯಕರು.
8] ಬೆರಳಚ್ಚುಗಾರರು.
9] ವಾಹನ ಚಾಲಕರು.
10] ಗ್ರೂಪ್ 'ಡಿ' ನೌಕರರು / ಜಾರಿಗಾರರು.

ಕೊಡಗು ಜಿಲ್ಲೆಯಲ್ಲಿ ಇಲಾಖೆಗೆ ಮಂಜೂರಾದ ಹುದ್ದೆಗಳ ಸಂಖ್ಯೆ ಮತ್ತು ಕಾರ್ಯನಿರ್ವಹಿಸುತ್ತಿರುವ ಹಾಗೂ ಖಾಲಿ ಇರುವ ಹುದ್ದೆಗಳ ವಿವರ ಕೆಳಕಂಡಂತಿರುತ್ತದೆ.

| ಕ್ರ. ಸಂ. | ಹುದ್ದೆಗಳ ವಿವರ | ಮಂಜೂರಾದ ಹುದ್ದೆಗಳು | ಕಾರ್ಯ ನಿರ್ವಹಿಸುತ್ತಿರುವುದು | ಖಾಲಿ ಇರುವುದು |
|---|---|---|---|---|
| 1 | ಸಹಕಾರ ಸಂಘಗಳ ಉಪನಿಬಂಧಕರು. | 1 | 1 | – |
| 2 | ಸಹಕಾರ ಸಂಘಗಳ ಸಹಾಯಕ ನಿಬಂಧಕರು. | 1 | 1 | – |
| 3 | ಸಹಕಾರ ಅಭಿವೃದ್ಧಿ ಅಧಿಕಾರಿ | 3 | 3 | – |
| 4 | ಮಾರಾಟ ಅಧಿಕಾರಿ | 1 | 1 | – |
| 5 | ಅಧೀಕ್ಷಕರು | 2 | 2 | – |
| 6 | ಹಿರಿಯ ನಿರೀಕ್ಷಕರು | 3 | 3 | – |
| 7 | ನಿರೀಕ್ಷಕರು | 7 | 1 | 6 |
| 8 | ಪ್ರಥಮ ದರ್ಜೆ ಸಹಾಯಕರು | 3 | 2 | 1 |
| 9 | ದ್ವಿತೀಯ ದರ್ಜೆ ಸಹಾಯಕರು | 7 | 1 | 6 |

| ಕ್ರ. ಸಂ. | ಹುದ್ದೆಗಳ ವಿವರ | ಮಂಜೂರಾದ ಹುದ್ದೆಗಳು | ಕಾರ್ಯ ನಿರ್ವಹಿಸುತ್ತಿರುವುದು | ಖಾಲಿ ಇರುವುದು |
|---|---|---|---|---|
| 10 | ಶೀಘ್ರಲಿಪಿಗಾರರು | 1 | – | – |
| 11 | ಬೆರಳಚ್ಚುಗಾರರು | 3 | 1 | 2 |
| 12 | ವಾಹನ ಚಾಲಕರು | 2 | 1 | 1 |
| 13 | ಜಾರಿಗಾರರು | 2 | 1 | 1 |
| 14 | ಜವಾನರು | 6 | 5 | 1 |
| 15 | ವಸೂಲಾತಿ ಅಧಿಕಾರಿ | 1 | – | 1 |
| | **ಒಟ್ಟು** | **43** | **23** | **20** |

ಸಹಕಾರ ಸಂಘಗಳ ಉಪನಿಬಂಧಕರು, ತಾಲ್ಲೂಕಿನ ಮತ್ತು ತಾಲ್ಲೂಕು ವ್ಯಾಪ್ತಿಗಿಂತ ಹೆಚ್ಚು ಹಾಗೂ ಜಿಲ್ಲಾ ಮಟ್ಟಕಿಂತ ಕಡಿಮೆ ವ್ಯಾಪ್ತಿ ಹೊಂದಿದ ಸಹಕಾರ ಕಾರ್ಯನಿರ್ವಹಣೆಯ ನಿಯಂತ್ರಣದೊಂದಿಗೆ ಸಹಕಾರ ಸಂಘಗಳ ಅಭಿವೃದ್ಧಿಯ ಜವಾಬ್ದಾರಿಯನ್ನು ಹೊಂದಿರುತ್ತಾರೆ ಮತ್ತು ಸಹಕಾರ ಸಂಘಗಳ ಉಪನಿಬಂಧಕರು ಚಿಟ್ ಫಂಡ್ ಕಾಯ್ದೆ, ಲೇವಾದೇವಿ ಮತ್ತು ಗಿರವಿ ಕಾಯ್ದೆಯಂತೆ ಜಿಲ್ಲೆಯ ಲೇವಾದೇವಿ, ಗಿರವಿ ನಿಬಂಧಕರಾಗಿ ಹಾಗೂ ಚೀಟಿ ಉಪನಿಬಂಧಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ ಮತ್ತು ಕೊಡಗು ಜಿಲ್ಲೆಯ ಜಿಲ್ಲಾ ಪಂಚಾಯತ್ ನಿಯಂತ್ರಣದಲ್ಲಿ ಯೋಜನಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಅನುಷ್ಠಾನಾಧಿಕಾರಿಯಾಗಿಯೂ ಸಹ ಕಾರ್ಯನಿರ್ವಹಿಸುತ್ತಿದ್ದಾರೆ ಹಾಗೂ ಸಂಘ:ಸಂಸ್ಥೆಗಳ ನೊಂದಣಿ ಅಧಿಕಾರ ಹೊಂದಿರುತ್ತಾರೆ.

ಕೊಡಗು ಜಿಲ್ಲೆಯಲ್ಲಿ ಕೊಡಗು ಉಪವಿಭಾಗ ಮಾತ್ರ ಇದ್ದು, ಈ ಉಪವಿಭಾಗದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಾಲ್ಲೂಕು ಮಟ್ಟಕ್ಕಿಂತ ಕಡಿಮೆ ವ್ಯಾಪ್ತಿ ಹೊಂದಿದ ಸಹಕಾರ ಸಂಘಗಳ ಕಾರ್ಯನಿರ್ವಹಣೆಯ ನಿಯಂತ್ರಣದೊಂದಿಗೆ ಸಹಕಾರ ಸಂಘಗಳ ಅಭಿವೃದ್ಧಿ ಜೊತೆಗೆ ಯೋಜನಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಜವಾಬ್ದಾರಿಯನ್ನು ಹೊಂದಿರುತ್ತಾರೆ ಮತ್ತು ಮಡಿಕೇರಿ, ವೀರಾಜಪೇಟೆ ಹಾಗೂ ಸೋಮವಾರಪೇಟೆ ತಾಲ್ಲೂಕಿನಲ್ಲಿ ಕ್ಷೇತ್ರ ಸಿಬ್ಬಂದಿಗಳಾಗಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು ಇಲಾಖೆಯ ಕಾರ್ಯಕ್ರಮಗಳ ಅನುಷ್ಠಾನದ ಕಾರ್ಯನಿರ್ವಹಿಸುತ್ತಿದ್ದಾರೆ.

**2] ಇಲಾಖೆಯ ಅಧಿಕಾರಿಗಳು / ಸಿಬ್ಬಂದಿಗಳ ಕರ್ತವ್ಯ ಮತ್ತು ಜವಾಬ್ದಾರಿಗಳ ವಿವರ**

ಸಹಕಾರ ಸಂಘಗಳ ಉಪನಿಬಂಧಕರು, ಕೊಡಗು ಜಿಲ್ಲೆಯ ಸಹಕಾರ ಚಳುವಳಿಯ ಅಭಿವೃದ್ಧಿ ಹಾಗೂ ಇಲಾಖೆಯ ವಿಶೇಷ ಕಾರ್ಯಕ್ರಮಗಳು, ಯೋಜನೆಯ ಅನುಷ್ಟಾನದ ಜವಬ್ದಾರಿ ಹೊಂದಿರುತ್ತಾರೆ. ಸದರಿ ಅಧಿಕಾರಿಯವರ ಕಾರ್ಯವು ಆಡಳಿತಾತ್ಮಕ, ಕ್ಷೇತ್ರ ಅಭಿವೃದ್ಧಿ , ಶಾಸನ ಬದ್ದ ಮತ್ತು ಅಭಿವೃದ್ಧಿಯ ಜವಾಬ್ದಾರಿ ಹೊಂದಿರುತ್ತಾರೆ. ಮತ್ತು ಜಿಲ್ಲೆಯ ಸಹಕಾರ ಸಂಘಗಳ ಮತ್ತು ಸಹಕಾರ ಇಲಾಖೆಯ ಸಿಬ್ಬಂದಿಯವರ ನಿಯಂತ್ರಣ, ಸಮನ್ವಯದೊಂದಿಗೆ ಮೇಲ್ವಿಚಾರಣೆ ನಡೆಸುವುದು ಮತ್ತು ಇಲಾಖೆಯ ಮೇಲಾಧಿಕಾರಿಗಳ ನಿಯಂತ್ರಣಕ್ಕೊಳಪಟ್ಟು ಕಾರ್ಯನಿರ್ವಹಿಸುವುದು.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಉಪವಿಭಾಗ ಮಟ್ಟದಲ್ಲಿ ಸಹಕಾರ ಚಳುವಳಿಯ ಅಭಿವೃದ್ಧಿ ಹಾಗೂ ಇಲಾಖೆಯ ವಿಶೇಷ ಕಾರ್ಯಕ್ರಮಗಳು, ಯೋಜನೆಯ ಅನುಷ್ಠಾನದ ಜವಬ್ದಾರಿ ಹೊಂದಿರುತ್ತಾರೆ. ಸದರಿ ಅಧಿಕಾರಿಯವರ ಕಾರ್ಯವು ಆಡಳಿತಾತ್ಮಕ ಕ್ಷೇತ್ರ ಅಭಿವೃದ್ಧಿ, ಶಾಸನ ಬದ್ದ ಮತ್ತು ಅಭಿವೃದ್ಧಿ ಜವಬ್ದಾರಿ, ಮತ್ತು ಉಪ ವಿಭಾಗದ ಸಹಕಾರ ಸಂಘಗಳ ಮತ್ತು ಸಿಬ್ಬಂದಿಯವರ ನಿಯಂತ್ರಣ, ಸಮನ್ವಯದೊಂದಿಗೆ ಮೇಲ್ವಿಚಾರಣೆ ನಡೆಸುವುದು ಮತ್ತು ಇಲಾಖೆಯ ಮೇಲಾಧಿಕಾರಿಗಳ ನಿಯಂತ್ರಣಕೊಳಪಟ್ಟು ಕಾರ್ಯ ನಿರ್ವಹಿಸುವುದು.

ಸಹಕಾರ ಅಭಿವೃದ್ಧಿ ಅಧಿಕಾರಿಗಳು ತಾಲ್ಲೂಕು ಮಟ್ಟದಲ್ಲಿ ಸಹಕಾರ ಚಳುವಳಿಯ ಅಭಿವೃದ್ಧಿ ಹಾಗೂ ಇಲಾಖೆಯ ವಿಶೇಷ ಕಾರ್ಯಕ್ರಮಗಳು, ಯೋಜನೆಯ ಅನುಷ್ಟಾನದ ಜವಾಬ್ದಾರಿ ಹೊಂದಿರುತ್ತಾರೆ. ಸದರಿ ಅಧಿಕಾರಿಯವರು ಕ್ಷೇತ್ರ ಅಭಿವೃದ್ಧಿಯ ಜವಾಬ್ದಾರಿ ಹೊಂದಿರುತ್ತಾರೆ. ಮತ್ತು ತಾಲ್ಲೂಕಿನ ಮಟ್ಟದಲ್ಲಿ ಸಹಕಾರ ಸಂಘಗಳ ಸಿಬ್ಬಂದಿಯವರ ಸಮನ್ವಯದೊಂದಿಗೆ ಮೇಲ್ವಿಚಾರಣೆ ನಡೆಸುವುದು ಮತ್ತು ಇಲಾಖೆಯ ಮೇಲಾಧಿಕಾರಿಗಳ ನಿಯಂತ್ರಣಕ್ಕೊಳಪಟ್ಟು ಕಾರ್ಯನಿರ್ವಹಿಸುವುದು.

**ಸಹಕಾರ ಸಂಘಗಳ ಉಪನಿಬಂಧಕರು, ಮಡಿಕೇರಿ ಇವರ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳ ವಿಷಯ ನಿರ್ವಹಣೆಯ ವಿವರ ಕೆಳಕಂಡಂತೆ ಇರುತ್ತದೆ.**

| ಕ್ರ. ಸಂ. | ಹುದ್ದೆಯ ವಿವರ | ವಿಷಯ ನಿರ್ವಾಹಕರ ಹೆಸರು ಶ್ರೀ/ಶ್ರೀಮತಿ | ವಿಷಯ ನಿರ್ವಹಣೆ ನಿಬಂಧಕರ ಕಛೇರಿಗೆ ನಿಯೋಜಿತಗೊಂಡಿರುತ್ತಾರೆ. |
|---|---|---|---|
| 1 | ಸಹಕಾರ ಅಭಿವೃದ್ಧಿ ಅಧಿಕಾರಿ, ಮಡಿಕೇರಿ | ಕೆ.ಡಿ.ಮಾದಯ್ಯ | ಸಹಕಾರ ಸಂಘಗಳ ನಿಬಂಧಕರ ಕಛೇರಿಗೆ ನಿಯೋಜನೆ. |
| 2 | ಅಧೀಕ್ಷಕರು | ಆರ್.ಶ್ರೀಧರ್. | ಆಡಳಿತ ಮತ್ತು ಸಿಬ್ಬಂದಿ ಶಾಖೆ ಲೇವಾದೇವಿ, ಗಿರವಿ, ಹಣಕಾಸು ಸಂಸ್ಥೆಗಳು ಹಾಗೂ ಚಿಟ್ಸ್, ಮಾಹಿತಿ ಹಕ್ಕು ಕಾಯಿದೆ, ವ್ಯಾಜ್ಯ ಶಾಖೆ, ದೂರವಾಣಿ ಮತ್ತು ಪ್ಯಾಕ್ಸ್‌ಯಂತ್ರ ನಿರ್ವಹಣೆ. ಉಪನಿಬಂಧಕರು ಸೂಚಿಸುವ ಇನ್ನಿತರೆ ಕೆಲಸಗಳು. |
| 3 | ಬೆರಳಚ್ಚುಗಾರರು | ಬಿ.ಬಿ.ಮೀನಾಕ್ಷಿ | ಬೆರಳಚ್ಚು ಶಾಖೆ, ಸ್ಟಾಂಪ್, ಕಂಪ್ಯೂಟರ್ ನಿರ್ವಹಣೆ ಜೆರಾಕ್ಸ್‌ಯಂತ್ರ ನಿರ್ವಹಣೆ, ಕೊರೆಯಚ್ಚು ಯಂತ್ರ ಮೇಲುಸ್ತುವಾರಿ, ಇಂದ ಮತ್ತು ಗೆ, ಅಭಿಲೇಖಾಲಯ ನಿರ್ವಹಣೆ ಹಾಗೂ ಉಪನಿಬಂಧಕರು ಸೂಚಿಸುವ ಇನ್ನಿತರೆ ಕೆಲಸಗಳು. |
| 4 | ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು | ಎಂ.ಎಸ್.ಮೋಹನ್ | ಯೋಜನೆ, ವ್ಯಾಪಾರಾಭಿವೃದ್ಧಿ, ವೈದ್ಯನಾಥನ್ ವರದಿ ಅನುಷ್ಠಾನ, ಯಶಸ್ವಿನಿ ಸಹಕಾರ ಸಂಘಗಳ ಕಟ್ಟಡ ನಿರ್ಮಾಣ ಆಡಳಿತಾತ್ಮಕ ಅನುಮೋದನೆ, ಮಾರಾಟ ಇತ್ಯಾದಿ ಉಪನಿಬಂಧಕರು ಸೂಚಿಸುವ ಇನ್ನಿತರೆ ಕೆಲಸಗಳು. |
| 5 | ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು | ಎಂ.ಈ.ಮೋಹನ್ | ಆರ್.ಎಸ್.ಆರ್ ಶಾಖೆ. ಸಹಕಾರ ಸಂಘಗಳ ನೋಂದಣಿ, ಬೈಲಾ ತಿದ್ದುಪಡಿ, ನಿ.17, ಸಮಾಪನೆ ಲೆಕ್ಕ ಶಾಖೆ, ವಾಹನ ನಿರ್ವಹಣ, ಉಪನಿಬಂಧಕರ ಪ್ರವಾಸ ಮತ್ತು ದಿನಚರಿ ನಿರ್ವಹಣೆ ಪೀಠೋಪಕರಣಗಳು, ವಾರ್ಷಿಕ ಮಹಾ ಸಭೆ ಹಾಗೂ ಚುನಾವಣೆ ಹಾಗೂ ಉಪನಿಬಂಧಕರು ಸೂಚಿಸುವ ಇನ್ನಿತರೆ ಕೆಲಸಗಳು. |
| 6 | ದ್ವಿತೀಯ ದರ್ಜೆ ಸಹಾಯಕರು | ನರಸಿಂಹಮೂರ್ತಿ | ಸಂಘಗಳ ನೊಂದಣಿ, ಆಡಿಟ್, ಎಲ್ಲಾ ವಿಧದ ಸಭೆಗಳು ಮಹೋತ್ಸವ, ಅಧ್ಯಯನ ಪ್ರವಾಸ, ಹಣದುರುಪಯೋಗ ಮತ್ತು ಸಾರ್ವಜನಿಕ ದೂರು ಹಾಗೂ ಉಪನಿಬಂಧಕರು ಸೂಚಿಸುವ ಇನ್ನಿತರೆ ಕೆಲಸಗಳು. |
| 7 | ಪ್ರಥಮ ದರ್ಜೆ ಸಹಾಯಕರು | ಎಸ್.ನಾಗೇಶ್ | ಪತ್ತು ಶಾಖೆ, ಕಲಂ 64,65,30,31,ವಾರ್ಷಿಕ ಅಂಕಿ ಅಂಶ ಕ್ರೂಢೀಕರಣ ವಾರ್ಷಿಕ ಪರಿವೀಕ್ಷಣೆ ಸಹಕಾರ ಸಂಘಗಳ ಪಟ್ಟಿ ಹಾಗೂ ಉಪನಿಬಂಧಕರು ಸೂಚಿಸುವ ಇನ್ನಿತರೆ ಕೆಲಸಗಳು |
| 8 | ವಾಹನ ಚಾಲಕರು | ಹೆಚ್.ಎ.ಉಗ್ಗಪ್ಪ | ವಾಹನ ಚಾಲಕರು. |
| 9 | ಡಿ.ಗ್ರೂಪ್ ನೌಕರರು | ಸೋಮಯ್ಯ | |
| 10 | ಡಿ.ಗ್ರೂಪ್ ನೌಕರರು | ಕೆ.ಎ.ಸಿದ್ದಿಕ್ | |
| 11 | ಡಿ.ಗ್ರೂಪ್ ನೌಕರರು | ಎನ್.ಎನ್.ಸೀತಮ್ಮ | |

**3] ವಿವಿಧ ಹಂತದ ನಿಯಮಾವಳಿಗಳ ನಿರ್ಧಾರಿಕೆ ಮತ್ತು ಮೇಲ್ವಿಚಾರಣೆ**

ಸಹಕಾರ ಸಂಘಗಳ ಉಪನಿಬಂಧಕರು, ಕೊಡಗು ಜಿಲ್ಲೆಗೆ ಮುಖ್ಯಸ್ಥರಾಗಿದ್ದು, ಇವರು ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮದನ್ವಯ ರಾಜ್ಯ ಸರ್ಕಾರದಿಂದ ದತ್ತವಾದ ಅಧಿಕಾರದಂತೆ ಕಾರ್ಯನಿರ್ವಹಿಸಬೇಕಾಗಿರುತ್ತದೆ. ಸಹಕಾರ

ಸಂಘಗಳ ಉಪನಿಬಂಧಕರಿಗೆ ಕ್ಷೇತ್ರ ಅಧಿಕಾರಿಗಳಾದ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು, ಸಹಕಾರ ಸಂಘಗಳ ನಿರೀಕ್ಷಕರು ಹಾಗೂ ಕಛೇರಿ ಅಧೀಕ್ಷಕರು, ಪ್ರಥಮ ದರ್ಜೆ ಸಹಾಯಕರು, ದ್ವಿತೀಯ ದರ್ಜೆ ಸಹಾಯಕರು, ಇವರು ಕೆಲಸ ಕಾರ್ಯಗಳಿಗೆ ವಿಷಯ ನಿರ್ವಾಹಕರಾಗಿ ಮತ್ತು ಕ್ಷೇತ್ರ ಅಭಿವೃದ್ಧಿ ಕೆಲಸಗಳಿಗೆ ದಿನನಿತ್ಯ ನೆರವಾಗುತ್ತಿದ್ದು, ಸಹಕಾರ ಸಂಘಗಳ ಉಪನಿಬಂಧಕರು ಪ್ರತಿಯೊಂದು ವಿಷಯಗಳ ಬಗ್ಗೆ ನಿರ್ಧರಿಕೆಯ ಅಧಿಕಾರಿಯಾಗಿರುತ್ತಾರೆ. ಇವರು ಸರ್ಕಾರ ಮತ್ತು ಸಹಕಾರ ಇಲಾಖೆ ಹೊರಡಿಸುವ ಆದೇಶಗಳನ್ನು ಅನುಷ್ಠಾನಗೊಳಿಸುವ ಜಿಲ್ಲೆಯ ಅಧಿಕಾರಿಯಾಗಿರುತ್ತಾರೆ.

**4] ಇಲಾಖೆಯಲ್ಲಿ ಕರ್ತವ್ಯ ನಿರ್ವಹಣೆಗೆ ವಿಧಿಸಿಕೊಂಡಿರುವ ನಿಯಮಾವಳಿಗಳು**

ಸಹಕಾರ ಚಳುವಳಿಯ ಬೆಳೆವಣಿಗೆಗೆ ಪೂರಕವಾಗಿ ಸಹಕಾರ ಇಲಾಖೆ ನಿಯಮಾವಳಿಗಳನ್ನು ರೂಪಿಸಿಕೊಂಡು ವಿಳಂಬವಿಲ್ಲದೆ ಪತ್ರಗಳ ವಿಲೇವಾರಿ ಮತ್ತು ಅತಿಮುಖ್ಯ ಪತ್ರಗಳನ್ನು ಅದ್ಯತೆ ಮೇರೆ ವಿಲೇವಾರಿಗೆ ಕ್ರಮವಿಡುವುದು. ಇಲಾಖೆಯ ಸಿಬ್ಬಂದಿಯವರಿಗೆ ವಿಷಯ ನಿರ್ವಾಹಣೆಯ ಜವಾಬ್ದಾರಿಯನ್ನು ನಿಗದಿಪಡಿಸಿ ಕಾಲಮಿತಿಯೊಳಗೆ ಪತ್ರ ವಿಲೇವಾರಿಗೆ ಅದ್ಯತೆಯನ್ನು ನೀಡಿ ಕಛೇರಿ ಕೈಪಿಡಿ ನಿಯಮಾವಳಿಯನ್ನು ಅನುಸರಿಸುವುದು. ಸಹಕಾರ ಇಲಾಖೆ ಅಧಿಕಾರಿಗಳು ಅರೆ ನ್ಯಾಯಾಲಿಕ ಪ್ರಾಧಿಕಾರಿಗಳಾಗಿದ್ದು, ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಅಡಿಯಲ್ಲಿ ಬರುವ ವ್ಯಾಜ್ಯಗಳನ್ನು ವಿಚಾರಣೆ ನಡೆಸಿ ತೀರ್ಪನ್ನು ನೀಡುವುದು ಹಾಗೂ ಸರ್ಕಾರದಿಂದ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರದಂತೆ ಕಾರ್ಯವನ್ನು ನಿರ್ವಹಿಸುವುದು.

**5] ಸಹಕಾರ ಸಂಘಗಳ ಉಪನಿಬಂಧಕರು / ಸಿಬ್ಬಂದಿಯವರು ತಮ್ಮ ಕರ್ತವ್ಯ ನಿರ್ವಹಣೆಗಾಗಿ ಹೂಡಿರುವ ಕಾಯ್ದೆ. ನಿಯಮಗಳು ಹಾಗೂ ನಿರ್ವಹಿಸಲಾಗಿರುವ ವಹಿಗಳ ಮತ್ತು ದಾಖಲೆಗಳ ಪುಸ್ತಕಗಳ ವಿವರಗಳು.**

**(1) ಕಛೇರಿಯಲ್ಲಿ ನಿರ್ವಹಿಸಲಾಗಿರುವ ಕಾಯ್ದೆ ಮತ್ತು ನಿಯಮಗಳ ಪುಸ್ತಕಗಳು.**

1] ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಮತ್ತು ನಿಯಮಗಳು 1960.
2] ಕರ್ನಾಟಕ ಸೌಹಾರ್ದ ಸಹಕಾರಿಗಳ ಕಾಯ್ದೆ 1997 ಮತ್ತು ನಿಯಮಗಳು.
3] ಚಿಟ್ ಫಂಡ್ ಆಕ್ಟ್ 1982 ಮತ್ತು ಚಿಟ್ ಫಂಡ್ ನಿಯಮಗಳು[ಕರ್ನಾಟಕ] 1983.
4] ಪಾನ್ ಬ್ರೋಕರ್ಸ್ ಕಾಯ್ದೆ 1961 ಮತ್ತು ನಿಯಮಗಳು 1966.
5] ಕರ್ನಾಟಕ ಮನಿಲೆಂಡರ್ಸ್ ಕಾಯ್ದೆ 1961 ನಿಯಮಗಳು 1965.
6] ಕರ್ನಾಟಕ ಮಿತಿಮೀರಿದ ಬಡ್ಡಿ ವಿಧಿಸುವಿಕೆ ಕಾಯ್ದೆ 2004.

**(2) ಉಪನಿಬಂಧಕರ ಕಛೇರಿಯಲ್ಲಿ ನಿರ್ವಹಿಸುತ್ತಿರುವ ಇತರೆ ನಿಯಮಗಳ ಪುಸ್ತಕಗಳು.**

1] ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು.
2] ಕರ್ನಾಟಕ ಸಾಮಾನ್ಯ ನೇಮಕಾತಿ ನಿಯಮಗಳು.
3] ಕರ್ನಾಟಕ ನಾಗರೀಕ ಸೇವಾ [ವೈದ್ಯಕೀಯ ಹಾಜರಾತಿ] ನಿಯಮಗಳು.
4] ಕರ್ನಾಟಕ ನಾಗರೀಕ ಸೇವೆಗಳು [ಕಾಲಮಿತಿ ಬಡ್ತಿ] ನಿಯಮಗಳು
5] ಕರ್ನಾಟಕ ನಾಗರೀಕ ಸೇವೆಗಳು [ ಸ್ವಯಂ ಚಾಲಿತ ಮುಂಬಡ್ತಿ ] .
6] ಇಲಾಖೆಯಿಂದೆ ಹೊರಡಿಸಿರುವ ಮುಖ್ಯ ಆದೇಶಗಳು.

**(3) ಉಪನಿಬಂಧಕರು ಕಛೇರಿಯಲ್ಲಿ ನಿರ್ವಹಿಸುತ್ತಿರುವ ವಹಿಗಳು**

1] ಯಿಂದ ಪುಸ್ತಕ
2] ರವಾನೆ ಪುಸ್ತಕ
3] ಸಿಬ್ಬಂದಿ ಸೇವಾ ಪುಸ್ತಕಗಳು
4] ಹಾಜರಾತಿ ಪುಸ್ತಕ
5] ಸಂಬಳ, ಪ್ರವಾಸ ಭತ್ಯ ಮತ್ತು ಸಾದಿಲ್ವಾರು ಪಾವತಿ ಪುಸ್ತಕ
6] ನಗದು ಪುಸ್ತಕ
7] ವಿಷಯ ನಿರ್ವಾಹಕರ ವೈಯಕ್ತಿಕ ವಹಿ
8] ಸಿಬ್ಬಂದಿ ಚಲನವಲನ ಪುಸ್ತಕ

9] ವಾಹನದ ಚಲನವಲನ ಪುಸ್ತಕ

**(4) ಇತರೆ ಕಡತಗಳು ಮತ್ತು ದಾಖಲೆಗಳು.**

1] ನೊಂದಣಿ ವಹಿ

2] ಸಹಕಾರ ಸಂಘಗಳ ನೊಂದಣಿ ಪಟ್ಟಿ

3] ಬೈಲಾ ತಿದ್ದುಪಡಿ ವಹಿ ಮತ್ತು ಕಡತ

4] ಹಣ ದುರುಪಯೋಗದ ಕಡತ ಮತ್ತು ತಃಖ್ತೆಗಳು

5] ಯೋಜನಾ ಶಾಖೆಯ ಅನುಷ್ಠಾನದ ವಹಿ ಮತ್ತು ಕಡತ

6] ಲೇವಾದೇವಿ ಮತ್ತು ಗಿರವಿ ವಹಿ ಮತ್ತು ಕಡತ

7] ಸಹಕಾರ ಸಂಘಗಳ ನಿಯಮ 17ರ ಕಡತ

8] ಸಹಕಾರ ಸಂಘಗಳ ಕಾಯ್ದೆ ಕಲಂ 64, 65ರ ವಿಚಾರಣೆ/ ಪರಿವೀಕ್ಷಣೆ ವಹಿ

9] ಸಹಕಾರ ಸಂಘಗಳ ಕಾಯ್ದೆ ಕಲಂ 68ರ ಆದೇಶದ ಕಡತ

10] ಸಹಕಾರ ಸಂಘಗಳ ಕಾಯ್ದೆ ಕಲಂ 29 [ಸಿ]ನ ಕಡತ

11] ಸಹಕಾರ ಸಂಘಗಳ ಕಾಯ್ದೆ ಕಲಂ 30[1], 31, 28[ಎ] ಸಂಬಂಧಿಸಿದ ಕಡತಗಳು

12] ಸಹಕಾರ ಸಂಘಗಳ ಕಾಯ್ದೆ ಕಲಂ 63ರ ಆಡಿಟ್ ವರದಿಯ ವಹಿ

13] ಸಹಕಾರ ಸಂಘಗಳ ಕಾಯ್ದೆ ಕಲಂ 70ರ ವಹಿ

14] ಸಹಕಾರ ಸಂಘಗಳ ಕಾಯ್ದೆ ಕಲಂ 69ರ ವಹಿ

15] ದಾವಾ ಶಾಖೆಯ ನಗದು ಪುಸ್ತಕ

16] ವಾರ್ಷಿಕ ಅಂಕಿ ಅಂಶಗಳ ತಃಖ್ತೆ

17] ಸ್ಟಾಂಪ್ ನಿರ್ವಹಣೆಯ ವಹಿ

18] ದೂರು ಅರ್ಜಿ ವಿಲೇವಾರಿ ವಹಿ/ಕಡತ

19] ಸಮಾಪನೆ, ಸಹಕಾರ ಸಂಘಗಳ ವಹಿ

20] ಆಡಳಿತ ಮಂಡಳಿ ರಚನೆಯ ವಾಚ್ ರಿಜಿಸ್ಟರ್

21] ಮಹಾಸಭೆಯ ವಹಿ

22] ಸರ್ಕಾರದಿಂದ ನಾಮನಿರ್ದೇಶನ ಹೊಂದಿದವರ ಕಡತ

23] ಲೇಖನ ಸಾಮಗ್ರಿ ರಿಜಿಸ್ಟರ್

24] ವಾರ್ಷಿಕ ಪರಿವೀಕ್ಷಣೆ ಕಡತ

25] ಸಂಘಗಳ ನೊಂದಣಿ ಕಾಯ್ದೆ 1960.

**(6) ಉಪನಿಬಂಧಕರ ಕಛೇರಿಯಲ್ಲಿ ನಿರ್ವಹಿಸುತ್ತಿರುವ ವಿವಿಧ ನಿಯತಕಾಲಿಕೆಗಳ ವಿವರಗಳು**

ಉಪನಿಬಂಧಕರು, ಕೊಡಗು ಕಛೇರಿಯಲ್ಲಿ ಮಾಸಿಕವಾಗಿ ವಿವಿಧ ರೀತಿಯ ಸಹಕಾರ ಸಂಘಗಳ ಪ್ರಗತಿ ಪರಿಶೀಲನೆಯನ್ನು ಕೈಗೊಂಡು ಮಾಹಿತಿಯನ್ನು ಕ್ರೂಢಿಕರಿಸಿ ತಃಖ್ತೆಗಳನ್ನು ತಯಾರಿಸಿ ಅಂಕಿ ಅಂಶಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸಲಾಗುತ್ತಿದೆ ಕ್ಷೇತ್ರಾಭಿವೃದ್ದಿ / ಆಡಳಿತಾತ್ಮಕ /ಶಾಸನಬದ್ದ / ಅರೆ ನ್ಯಾಯಾಲಯದ ವಿಷಯಗಳಿಗೆ ಸಂಬಂಧಪಟ್ಟಂತೆ ಮಾಹಿತಿಗಳನ್ನು ನಿರ್ವಹಣೆ ಮಾಡಲಾಗುತ್ತಿದೆ.

**(7) ಪ್ರಸ್ತುತ ವ್ಯವಸ್ಥೆಯಲ್ಲಿ ಸಾರ್ವಜನಿಕರು / ಸದಸ್ಯರು ಸಂಪರ್ಕಿಸಲು ಇಲಾಖೆಯಲ್ಲಿ ಸಾರ್ವಜನಿಕ ಸಂಪರ್ಕ ವ್ಯವಸ್ಥೆಯ ಆಯೋಜನೆಯ ಬಗ್ಗೆ.**

ಸದಸ್ಯರಿಗೆ / ಸಾರ್ವಜನಿಕರಿಗೆ ಸಂಪರ್ಕ ವ್ಯವಸ್ಥೆಗಾಗಿ ಕಛೇರಿಯಲ್ಲಿ ನಿಗದಿತ ವೇಳೆಯನ್ನು ನಿಗದಿಪಡಿಸಲಾಗಿದೆ. ಸಾರ್ವಜನಿಕರು / ಸದಸ್ಯರು ತಮ್ಮ ಸಮಸ್ಯೆಗಳ ಬಗ್ಗೆ ಚರ್ಚಿಸಿದಾಗ ಇಂತಹವರಿಗೆ ಸೂಕ್ತ ಮಾರ್ಗದರ್ಶನದೊಂದಿಗೆ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮ ಹಾಗೂ ಸರ್ಕಾರದ ಸುತ್ತೋಲೆಗಳ ಮಾಹಿತಿಯನ್ನು ನೀಡಲಾಗುತ್ತಿದೆ.

**(8) ಇಲಾಖೆಯ ಕಾರ್ಯನಿರ್ವಹಣೆಗಾಗಿ ನಿಗಮ ಮಂಡಳಿ ಸದಸ್ಯರು / ಕೌನ್ಸಿಲ್ಸ್ ರವರನ್ನು ಒಳಗೊಂಡಂತೆ ಎರಡು ಅಥವಾ ಎರಡಕ್ಕಿಂತ ಹೆಚ್ಚು ಇರುವ ಸದಸ್ಯರ ಕಮಿಟಿಯನ್ನು ರಚಿಸಿ ಅದರ ಮಾಹಿತಿಯನ್ನು ಸಾರ್ವಜನಿಕರಿಗೆ ದೊರಕಿಸುವ ಬಗ್ಗೆ.**

ಸಹಕಾರ ಇಲಾಖೆಯ ಸಲಹೆ ನೀಡಲು ಯಾವುದೇ ನಿಗಮ ಮಂಡಳಿ / ಸಮಿತಿ ಸದಸ್ಯರು/ ಕೌನ್ಸಿಲ್ಸ್ ಅಥವಾ ಕಮಿಟಿಗಳು ಇರುವುದಿಲ್ಲ.

**(9) ಸಹಕಾರ ಸಂಘಗಳ ಉಪನಿಬಂಧಕರು, ಕೊಡಗು ರವರ ಕಛೇರಿ ಹಾಗೂ ಕಾರ್ಯ ವ್ಯಾಪ್ತಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಅಧಿಕಾರಿಗಳು/ ಸಿಬ್ಬಂದಿಗಳ ವಿವರ.**

| ಕ್ರ. ಸಂ. | ಅಧಿಕಾರಿ/ ಸಿಬ್ಬಂದಿಗಳ ಹೆಸರು ಶ್ರೀ/ಶ್ರೀಮತಿ | ವರ್ಗ | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ವೃಂದಕ್ಕೆ ನೇಮಕವಾಗಿರುವ ದಿನಾಂಕ | ಕಾರ್ಯನಿರ್ವಹಿಸುತ್ತಿರುವ ಹುದ್ದೆ |
|---|---|---|---|---|---|---|
| 1 | ಗುರುಸ್ವಾಮಿ | ಎ | 23–4–1965 | 15–3–1997 | 18–1–2006 | ಸಹಕಾರ ಸಂಘಗಳ ಉಪನಿಬಂಧಕರು |
| 2 | ಜಿ.ಜಗದೀಶ | ಬಿ | 5–2–1953 | 6–12–1976 | 1–10–2009 | ಸಹಕಾರ ಸಂಘಗಳ ಸಹಾಯಕ ನಿಬಂಧಕರು |
| 3 | ಕೆ.ಡಿ.ಮಾದಯ್ಯ | ಬಿ | 4–8–1959 | 7–12–1988 | 12–10–2009 | ಸಹಕಾರ ಅಭಿವೃದ್ದಿ ಅಧಿಕಾರಿ |
| 4 | ಬಿ.ರಾಮಕೃಷ್ಣೇಗೌಡ | ಬಿ | 5–8–1951 | 17–3–1977 | 31–10–2009 | ಸಹಕಾರ ಅಭಿವೃದ್ದಿ ಅಧಿಕಾರಿ |
| 5 | ಹೆಚ್.ಎನ್.ರಮೇಶ್ | ಬಿ | 10–5–1972 | 11–2–1993 | 31–10–2009 | ಸಹಕಾರ ಅಭಿವೃದ್ದಿ ಅಧಿಕಾರಿ |
| 6 | ಆರ್.ಶ್ರೀಧರ್ | ಸಿ | 15–3–1962 | 4–4–84 | 26–11–2009 | ಅಧೀಕ್ಷಕರು |
| 7 | ಗೋಪಾಲಸ್ವಾಮಿ | ಸಿ | 15–3–1962 | 4–4–84 | 26–11–2009 | ಅಧೀಕ್ಷಕರು |
| 8 | ರಘು.ಎಸ್.ಎಂ | ಸಿ | 5–2–1970 | 11–1–1993 | 3–3–2010 | ಹಿರಿಯ ನಿರೀಕ್ಷಕರು |
| 9 | ಎಂ.ಈ.ಮೋಹನ್ | ಸಿ | 1–6–1970 | 7–10–1988 | 1–12–2009 | ಹಿರಿಯ ನಿರೀಕ್ಷಕರು |
| 10 | ಎಂ.ಎಸ್.ಮೋಹನ್ | ಸಿ | 16–3–1965 | 27–6–1988 | 1–12–2009 | ಹಿರಿಯ ನಿರೀಕ್ಷಕರು |
| 11 | ಸಿ.ಕೆ.ಭವಾನಿ | ಸಿ | 20–3–1960 | 7–10–1988 | 1–12–2009 | ಹಿರಿಯ ನಿರೀಕ್ಷಕರು |
| 12 | ಎಸ್.ನಾಗೇಶ್ | ಸಿ | 3–7–1971 | 3–1–1994 | 5–4–2007 | ಪ್ರಥಮ ದರ್ಜೆ ಸಹಾಯಕರು. |
| 13 | ಪಿ.ಬಿ.ಮೋಹನ್ ಕುಮಾರ್ | ಸಿ | 5–1–1967 | 3–11–1997 | 1–12–2009 | ಪ್ರಥಮ ದರ್ಜೆ ಸಹಾಯಕರು. |
| 14 | ಮಂಜುನಾಥ . ಎಂ | ಸಿ | 5–3–1977 | 24–4–2008 | 24–4–2008 | ನಿರೀಕ್ಷಕರು |
| 15 | ನರಸಿಂಹಮೂರ್ತಿ | ಸಿ | 7–4–1963 | 10–4–97 | 18–11–2005 | ದ್ವಿತೀಯ ದರ್ಜೆ ಸಹಾಯಕರು. |
| 16 | ಬಿ.ಬಿ.ಮೀನಾಕ್ಷಿ | ಸಿ | 15–6–1955 | 5–1–1977 | 8–7–1991 | ಬೆರಳಚ್ಚುಗಾರರು |

| ಕ್ರ. ಸಂ. | ಅಧಿಕಾರಿ/ ಸಿಬ್ಬಂದಿಗಳ ಹೆಸರು ಶ್ರೀ/ಶ್ರೀಮತಿ | ವರ್ಗ | ಹುಟ್ಟಿದ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ವೃಂದಕ್ಕೆ ನೇಮಕವಾಗಿರುವ ದಿನಾಂಕ | ಕಾರ್ಯನಿರ್ವಹಿಸುತ್ತಿರುವ ಹುದ್ದೆ |
|---|---|---|---|---|---|---|
| 17 | ಹೆಚ್.ಎ.ಉಗ್ಗಪ್ಪ | ಸಿ | 20–11–1951 | 21–4–1980 | 21–4–1980 | ವಾಹನ ಚಾಲಕರು |
| 18 | ರತಿ | ಡಿ | 1–6–1973 | 26–11–2009 | 26–11–2009 | ಡಿ.ಗ್ರೂಪ್ ನೌಕರರು |
| 19 | ಕೆ.ವಿ.ಸಿದ್ದಿಕ್ | ಡಿ | 1–6–1961 | 1–12–1999 | 1–12–1999 | ಡಿ.ಗ್ರೂಪ್ ನೌಕರರು |
| 20 | ಸೋಮಯ್ಯ | ಡಿ | 15–2–1961 | 26–1–1993 | 26–1–1993 | ಡಿ.ಗ್ರೂಪ್ ನೌಕರರು |
| 21 | ಜೆ.ಮರಿಯಪ್ಪ | ಡಿ | 16–7–1955 | 11–11–2005 | 11–11–2005 | ಡಿ.ಗ್ರೂಪ್ ನೌಕರರು |
| 22 | ಎನ್.ಎಸ್.ಸೀತಮ್ಮ | ಡಿ | 24–5–1953 | 1–1–1990 | 1–1–1990 | ಡಿ.ಗ್ರೂಪ್ ನೌಕರರು |
| 23 | ರಾಜಮ್ಮ | ಡಿ | 16–3–1960 | 22–7–2002 | 22–7–2002 | ಡಿ.ಗ್ರೂಪ್ ನೌಕರರು |

**(10) ಸಹಕಾರ ಸಂಘಗಳ ಉಪನಿಬಂಧಕರು, ಕೊಡಗು ರವರ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳು/ಸಿಬ್ಬಂದಿಯವರ ಸಂಬಳದ ವಿವರ**

| ಕ್ರ. ಸಂ. | ಅಧಿಕಾರಿ/ಸಿಬ್ಬಂದಿ ವಿವರ ಶ್ರೀ/ಶ್ರೀಮತಿ | ಹುದ್ದೆಯ ವಿವರ | ಗ್ರೇಡ್ | ವೇತನ ಶ್ರೇಣಿ | ಮೂಲ ವೇತನ | ಒಟ್ಟು ವೇತನ |
|---|---|---|---|---|---|---|
| 1 | ಗುರುಸ್ವಾಮಿ | ಸಹಕಾರ ಸಂಘಗಳ ಉಪ ನಿಬಂಧಕರು | ಎ | 18150–26925 | 20025 | 30839 |
| 2 | ಜಿ.ಜಗದೀಶ | ಸಹಕಾರ ಸಂಘಗಳ ಸಹಾಯಕ ನಿಬಂಧಕರು | ಬಿ | 11400–21600 | 19500 | 29890 |
| 3 | ಕೆ.ಡಿ.ಮಾದಯ್ಯ | ಸಹಕಾರ ಅಭಿವೃದ್ದಿ ಅಧಿಕಾರಿ | ಬಿ | 10800–20025 | 13000 | 20010 |
| 4 | ಬಿ.ರಾಮಕೃಷ್ಣೇಗೌಡ | ಸಹಕಾರ ಅಭಿವೃದ್ದಿ ಅಧಿಕಾರಿ | ಬಿ | 10800–20025 | 17200 | 23222 |
| 5 | ಹೆಚ್.ಎನ್.ರಮೇಶ್ | ಸಹಕಾರ ಅಭಿವೃದ್ದಿ ಅಧಿಕಾರಿ | ಬಿ | 10800–20025 | 11400 | 16964 |
| 6 | ಆರ್.ಶ್ರೀಧರ್ | ಅಧೀಕ್ಷಕರು | ಸಿ | 10000–18150 | 12000 | 18190 |
| 7 | ಗೋಪಾಲಸ್ವಾಮಿ | ಅಧೀಕ್ಷಕರು | ಸಿ | 10000–18150 | 12000 | 18590 |
| 8 | ರಘು.ಎಸ್.ಎಂ | ಹಿರಿಯ ನಿರೀಕ್ಷಕರು | ಸಿ | 8825–16000 | 8825 | 13715 |
| 9 | ಎಂ.ಈ.ಮೋಹನ್ | ಹಿರಿಯ ನಿರೀಕ್ಷಕರು | ಸಿ | 8825–16000 | 10250 | 15955 |
| 10 | ಎಂ.ಎಸ್.ಮೋಹನ್ | ಹಿರಿಯ ನಿರೀಕ್ಷಕರು | ಸಿ | 8825–16000 | 10250 | 15605 |
| 11 | ಸಿ.ಕೆ.ಭವಾನಿ | ಹಿರಿಯ ನಿರೀಕ್ಷಕರು | ಸಿ | 8825–16000 | 10250 | 15605 |
| 12 | ಎಸ್.ನಾಗೇಶ್ | ಪ್ರಥಮ ದರ್ಜೆ ಸಹಾಯಕರು. | ಸಿ | 7275–13150 | 7800 | 12231 |

| ಕ್ರ. ಸಂ. | ಅಧಿಕಾರಿ/ಸಿಬ್ಬಂದಿ ವಿವರ ಶ್ರೀ/ಶ್ರೀಮತಿ | ಹುದ್ದೆಯ ವಿವರ | ಗ್ರೇಡ್ | ವೇತನ ಶ್ರೇಣಿ | ಮೂಲ ವೇತನ | ಒಟ್ಟು ವೇತನ |
|---|---|---|---|---|---|---|
| 13 | ಪಿ.ಬಿ.ಮೋಹನ್ ಕುಮಾರ್ | ಪ್ರಥಮ ದರ್ಜೆ ಸಹಾಯಕರು. | ಸಿ | 7275–13150 | 7800 | 11806 |
| 14 | ಮಂಜುನಾಥ . ಎಂ | ನಿರೀಕ್ಷಕರು | ಸಿ | 7275–13150 | 7625 | 11541 |
| 15 | ನರಸಿಂಹಮೂರ್ತಿ | ದ್ವಿತೀಯ ದರ್ಜೆ ಸಹಾಯಕರು. | ಸಿ | 5800–10500 | 7275 | 11009 |
| 16 | ಬಿ.ಬಿ.ಮೀನಾಕ್ಷಿ | ಬೆರಳಚ್ಚುಗಾರರು | ಸಿ | 7275–13350 | 12650 | 19268 |
| 17 | ಹೆಚ್.ಎ.ಉಗ್ಗಪ್ಪ | ವಾಹನ ಚಾಲಕರು | ಸಿ | 7275–13350 | 10500 | 16000 |
| 18 | ರತಿ | ಡಿ.ಗ್ರೂಪ್ ನೌಕರರು | ಡಿ | 5500–9500 | 5500 | 8660 |
| 19 | ಕೆ.ವಿ.ಸಿದ್ದಿಕ್ | ಡಿ.ಗ್ರೂಪ್ ನೌಕರರು | ಡಿ | 5500–9500 | 6650 | 10058 |
| 20 | ಸೋಮಯ್ಯ | ಡಿ.ಗ್ರೂಪ್ ನೌಕರರು | ಡಿ | 5500–9500 | 6500 | 10270 |
| 21 | ಜೆ.ಮರಿಯಪ್ಪ | ಡಿ.ಗ್ರೂಪ್ ನೌಕರರು | ಡಿ | 5500–9500 | 7450 | 11524 |
| 22 | ಎನ್.ಎಸ್.ಸೀತಮ್ಮ | ಡಿ.ಗ್ರೂಪ್ ನೌಕರರು | ಡಿ | 5500–9500 | 7450 | 11524 |
| 23 | ರಾಜಮ್ಮ | ಡಿ.ಗ್ರೂಪ್ ನೌಕರರು | ಡಿ | 4800–7275 | 5400 | 8408 |

**(11) ಸಹಕಾರ ಸಂಘಗಳ ಉಪನಿಬಂಧಕರು, ಕೊಡಗು ಸಹಕಾರ ಸಂಘಗಳ ಆರ್ಥಿಕ ಅಭಿವೃದ್ಧಿಗಾಗಿ ಅನುಷ್ಠಾನದ ಯೋಜನೆಗಳು ಮತ್ತು ಈ ಯೋಜನೆಯಡಿ 2009–10 ನೇ ಸಾಲಿನ ಅಯವ್ಯಯ ಮತ್ತು ಬಿಡುಗಡೆ ಹಾಗೂ 2010–11 ನೇ ಸಾಲಿಗೆ ಯೋಜನೆಯ ಕಾರ್ಯಕ್ರಮ.**

1] ರಾಜ್ಯ ವಲಯ ಯೋಜನೆಗಳು

2] ಕೇಂದ್ರ ಪುರಸ್ಕೃತ ಯೋಜನೆಗಳು

3] ಜಿಲ್ಲಾ ವಲಯ ಯೋಜನೆಗಳು

**1] ರಾಜ್ಯ ವಲಯ ಯೋಜನೆಗಳು**

ರಾಜ್ಯ ವಲಯ ಯೋಜನೆಯಡಿ ವಿವಿಧ ಅರ್ಹ ಸಹಕಾರ ಸಂಘಗಳಿಗೆ ದುಡಿಯುವ ಬಂಡವಾಳಕ್ಕೆ ಷೇರು ಬಂಡವಾಳ. ಸಹಕಾರ ಸಂಘಗಳಿಗೆ ವ್ಯಾಪಾರಭಿವೃದ್ಧಿ ಯೋಜನೆಗೆ ಸಾಲ ಮತ್ತು ಷೇರು ರೂಪದಲ್ಲಿ ಧನ ಸಹಾಯವನ್ನು ನೀಡಲಾಗುತ್ತಿದೆ. ಹಾಗೂ ವಿಶೇಷವಾಗಿ ಮಹಿಳಾ ಸಹಕಾರ ಸಂಘಗಳಿಗೆ ದುರ್ಬಲ ವರ್ಗದ ಸಹಕಾರ ಸಂಘಗಳಿಗೆ ಪುನಶ್ಚೇತನಕ್ಕಾಗಿ ವಿಶೇಷ ಯೋಜನೆಗಳನ್ನು ಅಯಾ ಸಂಘಕ್ಕೆ ಅನುಗುಣವಾಗಿ ರೂಪಿಸಿಕೊಂಡು ಧನಸಹಾಯವನ್ನು ನೀಡಲಾಗುತ್ತಿದೆ ಮತ್ತು ಸಹಕಾರ ಸಂಘಗಳಿಗೆ ಗೋದಾಮು ಮತ್ತು ವ್ಯಾಪಾರ ಮಳಿಗೆಗಳನ್ನು ನಿರ್ಮಿಸಲು ಈ ಯೋಜನೆಯಡಿ ಸಾಲ, ಷೇರು, ಸಹಾಯಧನ ರೂಪದಲ್ಲಿ ಧನಸಹಾಯವನ್ನು ಮಂಜೂರು ಮಾಡಲಾಗುತ್ತಿದೆ.

**2] ಕೇಂದ್ರ ಪುರಸ್ಕೃತ ಯೋಜನೆಗಳು**

ಕೇಂದ್ರ ಪುರಸ್ಕೃತ ಯೋಜನೆಯಡಿ ಸಹಕಾರ ಸಂಘಗಳ ಆರ್ಥಿಕ ಬಲವರ್ಧನೆಗಾಗಿ ಸಾಲ, ಷೇರು ಮತ್ತು ಸಹಾಯಧನ ರೂಪದಲ್ಲಿ ಧನಸಹಾಯವನ್ನು ಮಂಜೂರು ಮಾಡಿ ನೀಡಲಾಗುತ್ತಿದೆ. ಈ ಯೋಜನೆಯಡಿ ವಿಶೇಷವಾಗಿ ಮಹಿಳಾ ಸಹಕಾರ ಸಂಘಗಳಿಗೆ ಪ್ರಾಥಮಿಕ ಪತ್ತಿನ ಸಹಕಾರ ಸಂಘಗಳಿಗೆ ಮತ್ತು ಲ್ಯಾಂಪ್ಸ್ ಸಹಕಾರ ಸಂಘಗಳಿಗೆ ಧನ ಸಹಾಯವನ್ನು ನೀಡಿ ಈ ಸಹಕಾರ ಸಂಘಗಳ ಮೂಲಕ ಸಂಘದ ಸದಸ್ಯರಿಗೆ ಆರ್ಥಿಕ ನೆರವು ನೀಡಲು ಒತ್ತು ನೀಡಲಾಗುತ್ತಿದೆ.

**3] ಜಿಲ್ಲಾ ವಲಯ ಯೋಜನೆಗಳು**

ಜಿಲ್ಲಾ ಪಂಚಾಯತ್ ಯೋಜನೆಯಡಿ ಮಹಿಳಾ ಸಹಕಾರ ಸಂಘಗಳಿಗೆ, ಬಳಕೆದಾರರ ಸಹಕಾರ ಸಂಘಗಳಿಗೆ ಮತ್ತು ವಿವಿಧೋದ್ದೇಶ ಸಹಕಾರ ಸಂಘಗಳಿಗೆ ಆರ್ಥಿಕ ನೆರವನ್ನು ನೀಡಲಾಗುತ್ತಿದೆ ಹಾಗೂ ಸದಸ್ಯರ ಆಸ್ತಿಗಳ ಸೃಷ್ಟಿಗಾಗಿ ಪ್ರಾಥಮಿಕ ಕೃಷಿ ಸಹಕಾರ ಬ್ಯಾಂಕ್‌ಗಳ ಮೂಲಕ ವಿಶೇಷ ಘಟಕ ಯೋಜನೆಯಡಿ ಸಹಾಯಧನವನ್ನು ಮಂಜೂರು ಮಾಡಲಾಗುತ್ತಿದೆ.

**ಮೇಲ್ಕಂಡ ಯೋಜನೆಗಳಿಂದ ಮಂಜೂರು ಮಾಡಿ ಬಿಡುಗಡೆ ಮಾಡಿದ ಪ್ರಗತಿ ವಿವರ**

[ರೂ.ಲಕ್ಷಗಳಲ್ಲಿ]

| ಕ್ರ. ಸಂ. | ಯೋಜನೆಗಳ ವಲಯ | 2005–06 ನೇ ಸಾಲಿನ ಕಾರ್ಯಕ್ರಮ | |
|---|---|---|---|
| | | ಗುರಿ | ಸಾಧನೆ |
| 1 | 2 | 3 | 4 |
| 1 | ರಾಜ್ಯ ವಲಯ ಯೋಜನೆಗಳು | 6.10 | 2.27 |
| 2 | ಕೇಂದ್ರ ಪ್ರಾಯೋಜಿತ ಯೋಜನೆಗಳು | – | – |
| 3 | ಜಿಲ್ಲಾ ವಲಯ ಯೋಜನೆಗಳು ಹಾಗೂ ತಾಲ್ಲೂಕು ಪಂಚಾಯಿತಿ ಯೋಜನೆಗಳು | 14.75 | 14.74 |

**(12) ರಾಜ್ಯ ಸರ್ಕಾರದ ಬಡ್ಡಿ ಮನ್ನಾ ಯೋಜನೆಯಡಿ ಸಹಕಾರ ಸಂಘಗಳ ಸದಸ್ಯರುಗಳಿಗೆ ಲಭ್ಯವಾಗಲಿರುವ ಬಡ್ಡಿ ಮನ್ನಾದ ವಿವರ.**

1. ಕೃಷಿ ಸಾಲದ ಮೇಲೆ ಶೇಕಡ 6ರ ಬಡ್ಡಿ ರಿಯಾಯಿತಿ ಯೋಜನೆ.

**1] ಕೃಷಿ ಸಾಲದ ಮೇಲೆ ಶೇಕಡ 3ರ ಬಡ್ಡಿ ರಿಯಾಯಿತಿ ಯೋಜನೆ.**

ಸರ್ಕಾರದ ಆದೇಶ ಸಂಖ್ಯೆ : ಸಿಎಂಡಬ್ಲ್ಯೂ :107 :ಸಿಎಲ್ಎಸ್ :2009 ಬೆಂಗಳೂರು ದಿನಾಂಕ:5–3–2010 ರಲ್ಲಿ ಕರ್ನಾಟಕ ರಾಜ್ಯ ಸರ್ಕಾರವು ದಿನಾಂಕ:01–04–2008 ರಿಂದ ಶೇಕಡ 3 ರಷ್ಟು ಬಡ್ಡಿ ದರದಲ್ಲಿ ಕೃಷಿ ಸಾಲ ಸೌಲಭ್ಯ ರೈತರಿಗೆ ಒದಗಿಸುವ ಯೋಜನೆಯನ್ನು ಜಾರಿಗೆ ತಂದಿದ್ದು, ಈ ಯೋಜನೆಯು (2008–09ನೇ ಸಾಲಿನಲ್ಲಿ) ಸಹಕಾರ ಕೃಷಿ ಪತ್ತಿನ ಸಹಕಾರ ಸಂಘಗಳು ನೀಡುವ ಅಲ್ಪಾವಧಿ, ಮಧ್ಯಮಾವಧಿ ಹಾಗೂ ಪಿಕಾರ್ಡ್ ಬ್ಯಾಂಕ್‌ಗಳು ನೀಡುವ ಧೀರ್ಘಾವಧಿ ಸಾಲಗಳಿಗೆ ಅನ್ವಯವಾಗುತ್ತಿದ್ದು, ಈ ಯೋಜನೆಯಡಿ ಜಿಲ್ಲೆಗೆ ಸಂಬಂಧಿಸಿದಂತೆ ಒಟ್ಟು 20,335 ಫಲಾನುಭವಿಗಳಿಗೆ ರೂ :883.08 ಲಕ್ಷಗಳ ಮೊತ್ತಕ್ಕೆ ಸರ್ಕಾರಕ್ಕೆ ಬಿಲ್ಲುಗಳನ್ನು ಸಲ್ಲಿಸಲಾಗಿರುತ್ತದೆ. ಪ್ರಸ್ತುತ ಫಲಾನುಭವಿಗಳ ಬಾಬ್ತು ರೂ : 407.20 ಲಕ್ಷಗಳು ಬಿಡುಗಡೆಯಾಗಿರುತ್ತದೆ.

**(13) ಸಹಕಾರ ಇಲಾಖೆಯಿಂದ ಫಲಾನುಭವಿಗಳು ಪಡೆದ ರಿಯಾಯಿತಿ ಅಥವಾ ಇನ್ನಿತರೇ ಅನುದಾನಗಳ ಬಗ್ಗೆ.**

ಫಲಾನುಭವಿ ರೈತ ಸದಸ್ಯರಿಗೆ ನಿಯಮ ಮತ್ತು ಷರತ್ತನ್ನು ಅನುಸರಿಸಿ ಯೋಜನೆಗಳನ್ನು ರೂಪಿಸಲಾಗಿರುತ್ತದೆ. ಈ ಇಲಾಖೆ ಸಹಕಾರ ಸಂಘಗಳಿಗೆ ಷೇರು ರೂಪದಲ್ಲಿ ದುಡಿಯುವ ಬಂಡವಾಳ ಮತ್ತು ಸಹಾಯ ಧನವನ್ನು ಸಹಕಾರ ಸಂಘಗಳಿಗೆ ಮಂಜೂರು ಮಾಡಿ ನೀಡುತ್ತಿದೆ ಮತ್ತು ಯೋಜನೆಯಡಿ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ, ಅಲ್ಪಸಂಖ್ಯಾತರಿಗೆ ಮತ್ತು ಮಹಿಳೆಯರಿಗೆ ಸದಸ್ಯತ್ವ ನೊಂದಣಿಗಾಗಿ ಮೂಲ ಷೇರು ಧನವನ್ನು ನೀಡಲಾಗುತ್ತಿದೆ.

**(14) ಸಹಕಾರ ಇಲಾಖೆಯ ಮಾಹಿತಿಗಳ ಕಂಪ್ಯೂಟರೀಕರಣ ಬಗ್ಗೆ.**

ಸಹಕಾರ ಸಂಘಗಳ ನಿಬಂಧಕರ ಕಛೇರಿಯಿಂದ ಈ ಕಛೇರಿಗೆ ಕಂಪ್ಯೂಟರ್ ಒದಗಿಸಲಾಗಿರುತ್ತದೆ. ಆದರೆ ಕಂಪ್ಯೂಟರ್ ತಂತ್ರಜ್ಞಾನ ತರಬೇತಿ ಹೊಂದಿದೆ ಸಿಬ್ಬಂದಿಗಳು ಇಲ್ಲದಿರುವುದರಿಂದ ಮತ್ತು ತರಬೇತಿಗಾಗಿ ಸಿಬ್ಬಂದಿಯವರನ್ನು ಪ್ರಸ್ತುತ ನಿಯೋಜನೆ ಮಾಡದೇ ಇರುವುದರಿಂದ ಸ್ಥಳಿಯ ಖಾಸಗಿ ಸಿಬ್ಬಂದಿಯಿಂದ ಕಛೇರಿಯ ಕೆಲವೊಂದು ಮಾಹಿತಿಯನ್ನು ಕಂಪ್ಯೂಟರೀಕರಿಸಿ ಪ್ರಗತಿ ಮಾಹಿತಿಯನ್ನು ಮೇಲಾಧಿಕಾರಿಗಳಿಗೆ ಸಲ್ಲಿಸಲಾಗುತ್ತಿದೆ.

**(15) ಸಾರ್ವಜನಿಕರು ಮತ್ತು ನಾಗರೀಕರು ಸಹಕಾರ ಇಲಾಖೆಯ ಮಾಹಿತಿಯನ್ನು ಪಡೆಯಲು ಗ್ರಂಥಾಲಯ/ವಾಚನಾಲಯಗಳನ್ನು ಕಛೇರಿ ವೇಳೆಯಲ್ಲಿ ಪಡೆಯಲು ವ್ಯವಸ್ಥೆಯನ್ನು ಆಯೋಜನೆ ಬಗ್ಗೆ.**

ಸಾರ್ವಜನಿಕರಿಗೆ ಗ್ರಂಥಾಲಯ ವ್ಯವಸ್ಥೆ ಇರುವುದಿಲ್ಲ.

**(16) ಕೇಂದ್ರ ಮಾಹಿತಿ ಹಕ್ಕು ಕಾಯ್ದೆ 2005ರ ಕಲಂ 5[1],5[2]ರಡಿಯಲ್ಲಿ ಸಾರ್ವಜನಿಕ ಅಧಿಕಾರಿ, ಸಹಾಯಕ ಸಾರ್ವಜನಿಕ ಅಧಿಕಾರಿಯನ್ನು ಸಹಕಾರ ಸಂಘಗಳ ಉಪನಿಬಂಧಕರ ಕಛೇರಿಗೆ ಪ್ರದತ್ತವಾದ ಅಧಿಕಾರದಂತೆ ನೇಮಕ ಮಾಡುವ ಬಗ್ಗೆ.**

ಭಾರತ ಸರ್ಕಾರವು ಜಾರಿಗೆ ತಂದಿರುವ 2005ರ ಮಾಹಿತಿ ಹಕ್ಕು ಕಾಯ್ದೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಹಕ್ಕು ಅಧಿನಿಯಮ 2005ರ ಸೆಕ್ಷನ್ 5[1] , 5[2] ಮತ್ತು 19[1] ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕೊಡಗು ಸಹಕಾರ ಸಂಘಗಳ ಉಪನಿಬಂಧಕರು ಇವರ ಕಾರ್ಯಾಲಯದ ವ್ಯಾಪ್ತಿಯ ಮಾಹಿತಿಯನ್ನು ಕೋರುವ ವ್ಯಕ್ತಿಗಳಿಗೆ ಅಂತಹ ಮಾಹಿತಿಯನ್ನು ಮೇಲಿನ ಕಾಯ್ದೆಯನ್ವಯ ಒದಗಿಸಲು ಮಾಹಿತಿ ಕೋರುವ ಅರ್ಜಿಗಳು ಅಥವಾ ಮೇಲ್ಮನವಿಗಳನ್ನು ಸ್ವೀಕರಿಸಲು ಸಾರ್ವಜನಿಕ ಮಾಹಿತಿ ಅಧಿಕಾರಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳ ವಿವರವನ್ನು ಕೆಳಕಂಡಂತೆ ನೇಮಕ ಮಾಡಲಾಗಿದೆ.

| ಇಲಾಖೆಯ ಹೆಸರು | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 5[1] ಪ್ರಕಾರ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 5 [1] ಪ್ರಕಾರ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005ರ ಸೆಕ್ಷನ್ 19[1] ರ ಪ್ರಕಾರ ಮೇಲ್ಮನವಿ ಪ್ರಾಧಿಕಾರದ ಅಧಿಕಾರಿ |
|---|---|---|---|
| ಸಹಕಾರ ಇಲಾಖೆ, ಕೊಡಗು | ಸಹಕಾರ ಸಂಘಗಳ ಉಪನಿಬಂಧಕರು, ಕೊಡಗು ಜಿಲ್ಲೆ, ಮಡಿಕೇರಿ. | ಅಧೀಕ್ಷಕರು, ಉಪನಿಬಂಧಕರ ಕಛೇರಿ, ಕೊಡಗು ಜಿಲ್ಲೆ, ಮಡಿಕೇರಿ. | ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು. |

**(17) ಇತರೆ ಮಾಹಿತಿಗಳನ್ನು ಪ್ರತಿ ವರ್ಷ ನಿಗದಿತ ನಮೂನೆಯಲ್ಲಿ ಮಾಹಿತಿಯನ್ನು ಸಾರ್ವಜನಿಕರಿಗೆ ಪ್ರಕಟಿಸುತ್ತಿರುವ ಬಗ್ಗೆ.**

**ಜಿಲ್ಲೆಯ ಸಹಕಾರ ಸಂಘಗಳ ವಿವರ**

| ಕ್ರ. ಸಂ. | ಸಹಕಾರ ಸಂಘದ ವರ್ಗ | ಒಟ್ಟು ಸಂಖ್ಯೆ | ಕ್ರ. ಸಂ. | ಸಹಕಾರ ಸಂಘದ ವರ್ಗ | ಒಟ್ಟು ಸಂಖ್ಯೆ |
|---|---|---|---|---|---|
| 1 | ಡಿ.ಸಿ.ಸಿ. ಬ್ಯಾಂಕ್ | 1 | 16 | ನೀರು ಬಳಕೆದಾರರ ಸಹಕಾರ ಸಂಘಗಳು | 6 |
| 2 | ಪಿ ಸಿ ಎ ಆರ್ ಡಿ ಬ್ಯಾಂಕ್ | 3 | 17 | ಮೀನುಗಾರಿಕೆ ಸಹಕಾರ ಸಂಘಗಳ | 1 |
| 3 | ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ / ಬ್ಯಾಂಕಿನ | 69 | 18 | ಕೈಗಾರಿಕ ಸಹಕಾರ ಸಂಘಗಳು | 9 |
| 4 | ಲ್ಯಾಂಪ್ಸ್ ಸಹಕಾರ ಸಂಘಗಳ | 3 | 19 | ಗ್ರಾಹಕರ ಸಹಕಾರ ಸಂಘಗಳು | 10 |
| 5 | ರೇಷ್ಮೆ ಬೆಳೆಗಾರರ ಸಹಕಾರ ಸಂಘಗಳು | 1 | 20 | ಕೇಂದ್ರ ಸಗಟು ಮಾರಾಟ ಮಳಿಗೆ | 1 |
| 6 | ಸಹಕಾರಿ ಗ್ರೇನ್ ಬ್ಯಾಂಕ್ | 102 | 21 | ಗೃಹ ನಿರ್ಮಾಣ ಸಹಕಾರ ಸಂಘಗಳು | 1 |
| 7 | ಪಟ್ಟಣ ಸಹಕಾರ ಬ್ಯಾಂಕುಗಳು | 4 | 22 | ಜಿಲ್ಲಾ ಸಹಕಾರ ಒಕ್ಕೂಟ | 1 |
| 8 | ಇತರೆ ಪತ್ತಿನ ಸಹಕಾರ ಸಂಘಗಳು | 7 | 23 | ಜಿಲ್ಲಾ ಸಹಕಾರ ಮಹಾಮಂಡಳ | 1 |
| 9 | ನೌಕರರ ಪತ್ತಿನ ಸಹಕಾರ ಸಂಘಗಳು | 11 | 24 | ವಿವಿದೋದ್ದೇಶ ಸಹಕಾರ ಸಂಘ | 6 |

| ಕ್ರ. ಸಂ. | ಸಹಕಾರ ಸಂಘದ ವರ್ಗ | ಒಟ್ಟು ಸಂಖ್ಯೆ | ಕ್ರ. ಸಂ. | ಸಹಕಾರ ಸಂಘದ ವರ್ಗ | ಒಟ್ಟು ಸಂಖ್ಯೆ |
|---|---|---|---|---|---|
| 10 | ಟಿ.ಎ.ಪಿ.ಸಿ.ಎಂ.ಎಸ್. | 13 | 25 | ವಿದ್ಯಾರ್ಥಿ ಗ್ರಾಹಕರ ಸಹಕಾರ ಸಂಘಗಳು | 12 |
| 11 | ಇತರೆ ಮಾರಾಟ ಸಹಕಾರ ಸಂಘಗಳು | 3 | 26 | ಮಹಿಳಾ ಸಹಕಾರ ಸಂಘಗಳು | 12 |
| 12 | ಲೈವ್ ಸ್ಟಾಕ್ ಸಹಕಾರ ಸಂಘಗಳು | 4 | 27 | ಮಹಿಳಾ ವಿವಿದೋದ್ದೇಶ ಸಹಕಾರ ಸಂಘ | 9 |
| 13 | ಹಾಲು ಉತ್ಪಾದಕರ ಸಹಕಾರ ಸಂಘಗಳು | 31 | 28 | ದರ್ಜಿಗಳ ಸಹಕಾರ ಸಂಘಗಳು | 1 |
| 14 | ಸಂಯುಕ್ತ ಬೇಸಾಯ ಸಹಕಾರ ಸಂಘಗಳು | 3 | 29 | ಸಾರಿಗೆ ಸಹಕಾರ ಸಂಘಗಳು | 1 |
| 15 | ಏತ ನೀರಾವರಿ ಸಹಕಾರ ಸಂಘಗಳು | 2 | 30 | ಇತರೆ ಸಹಕಾರ ಸಂಘಗಳು | 7 |
| ಒಟ್ಟು | | | | | **334** |

**18. ಸಂಘ : ಸಂಸ್ಥೆಗಳ ನೊಂದಣಿ ಕಾಯ್ದೆ 1960.**

ಸಂಘ ಸಂಸ್ಥೆಗಳ ನೊಂದಣಿ ಕಾಯ್ದೆಯು ಸಹಕಾರ ಇಲಾಖೆಗೆ ದಿ:1–6–2008ರಿಂದ ಜಾರಿಗೆ ಬಂದಿರುತ್ತದೆ. ಜಿಲ್ಲೆಯಲ್ಲಿ ಒಟ್ಟು 2380 ಸಂಘ: ಸಂಸ್ಥೆಗಳು ನೊಂದಣಿಯಾಗಿರುತ್ತದೆ. ಪ್ರತಿ ವರ್ಷ ಸಂಘ : ಸಂಸ್ಥೆಗಳು ಮಹಾಸಭೆ ನಡೆಸಿದ 14 ದಿನಗಳ ಒಳಗಾಗಿ ಸರ್ಕಾರಕ್ಕೆ ನಿಗಧಿತ ಶುಲ್ಕ ಪಾವತಿಸಿ ಈ ಕಛೇರಿಯಲ್ಲಿ ಕಡತಗೊಳಿಸಬೇಕಾಗಿರುತ್ತದೆ.

**19. ಯಶಸ್ವಿನಿ ರೈತರ ಆರೋಗ್ಯ ರಕ್ಷಣಾ ಯೋಜನೆ.**

ಸಹಕಾರ ಸಂಘಗಳಲ್ಲಿ ಸದಸ್ಯರಾಗಿರುವ ರೈತ ಸದಸ್ಯರು ಹಾಗೂ ಅವರ ಅವಲಂಭಿತರಿಗೆ ಯಶಸ್ವಿನಿ ರೈತ ಆರೋಗ್ಯ ರಕ್ಷಣಾ ಯೋಜನೆಯಡಿ ವಿವಿಧ ಕಾಯಿಲೆಗಳಿಗೆ ಸಂಬಂಧಿಸಿದಂತೆ ಯಶಸ್ವಿನಿ ನೆಟ್‌ವರ್ಕ್ ಆಸ್ಪತ್ರೆಗಳ ಮೂಲಕ ಉಚಿತ ಶಸ್ತ್ರ ಚಿಕಿತ್ಸೆಗಳನ್ನು ಒದಗಿಸಲಾಗುತ್ತಿದೆ ಹಾಗೂ ಹೊರ ರೋಗಿಗಳಿಗೆ ರಿಯಾಯಿತಿ ದರದಲ್ಲಿ ಚಿಕಿತ್ಸೆಗಳನ್ನು ಒದಗಿಸಲಾಗುತ್ತಿದೆ, ಜಿಲ್ಲೆಯಲ್ಲಿ ಒಟ್ಟು 46714 ಸದಸ್ಯರನ್ನು ಈ ಯೋಜನೆಯಡಿ ನೊಂದಾಯಿಸಲಾಗಿದ್ದು ಈ ಪೈಕಿ 2009–10ನೇ ಸಾಲಿನಲ್ಲಿ 114 ಶಸ್ತ್ರ ಚಿಕಿತ್ಸೆಗಳು ಹಾಗೂ 475 ಹೊರ ರೋಗಿ ಚಿಕಿತ್ಸೆಗಳನ್ನು ಜಿಲ್ಲೆಯಲ್ಲಿ ಕೈಗೊಳ್ಳಲಾಗಿರುತ್ತದೆ.

**ಗುರುಸ್ವಾಮಿ**

ಪಿ.ಆರ್.995

ಸಹಕಾರ ಸಂಘಗಳ ಉಪನಿಬಂಧಕರು,

ಕೊಡಗು ಜಿಲ್ಲೆ , ಮಡಿಕೇರಿ.

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು

**ವಿಷಯ:** ಸಮಾಪನೆಗೊಂಡಿರುವ ರುದ್ರಾಪುರ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ರುದ್ರಾಪುರ, ಚನ್ನಗಿರಿ–ತಾ: ಇದರ ನೋಂದಣಿಯನ್ನು ರದ್ದುಪಡಿಸುವ ಕುರಿತು.

**ಉಲ್ಲೇಖ:**1) ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರ ಕಛೇರಿ ಆದೇಶ ಸಂಖ್ಯೆ: ಡಿಆರ್‌ಎಸ್/ ಎಲ್‌ಕ್ಯೂಡಿ/ಸಿಆರ್–704/1994–95, ದಿನಾಂಕ:31.08.1994.

2) ಸಮಾಪನಾಧಿಕಾರಿಗಳು, ರುದ್ರಾಪುರ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ರುದ್ರಾಪುರ, ಚನ್ನಗಿರಿ ತಾ: ಹಾಗೂ ಸಹಕಾರ ಅಭಿವೃದ್ಧಿ ಅಧಿಕಾರಿಗಳು, ಚನ್ನಗಿರಿ ಇವರ ಪತ್ರ ದಿನಾಂಕ: 29.03.2010.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ:1029 ದಿನಾಂಕ:01.05.1962ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ ಉಲ್ಲೇಖ (1)ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಇವರು ದಿನಾಂಕ:31.08.1994ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಡಿಆರ್:ಡಿವಿಜಿ:ನೋಸಂರ/ಸಿಆರ್/2009–10, ದಿನಾಂಕ:31ನೇ ಮಾರ್ಚ್, 2010**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಎಂಡಬ್ಲ್ಯೂ:69:ಸಿಎಲ್ಎಂ:2001, ದಿನಾಂಕ:21.11.2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ.ಕುಬೇರಪ್ಪ ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ರುದ್ರಾಪುರ ಸಂಯುಕ್ತ ಬೇಸಾಯ ಸಹಕಾರ ಸಂಘ ನಿ., ರುದ್ರಾಪುರ, ಚನ್ನಗಿರಿ ತಾಲ್ಲೂಕು ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:31.03.2010ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು,
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿ.ಆರ್.872

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಅಧಿಸೂಚನೆ**

**ಸಂಖ್ಯೆ: ಆಕುಕ 30 ಹೆಚ್ಎಸ್‌ಡಿ 2009, ಬೆಂಗಳೂರು, ದಿನಾಂಕ:4ನೇ ಜೂನ್, 2010**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಹಿರಿಯ ದಂತ ಆರೋಗ್ಯಾಧಿಕಾರಿಗಳ ವೃಂದದ ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2009ರಲ್ಲಿದ್ದಂತೆ ತಯಾರಿಸಲು ತೀರ್ಮಾನಿಸಿ, ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ) ನಿಯಮಾವಳಿ 1957ರ ನಿಯಮ 10ನ್ನು ಅನುಸರಿಸಿ ಸಂಬಂಧಿಸಿದ ಹಿರಿಯ ದಂತ ಆರೋಗ್ಯಾಧಿಕಾರಿಗಳ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 30 ಹೆಚ್ಎಸ್‌ಡಿ 2009 ದಿನಾಂಕ:27.11.2009ರಲ್ಲಿ ಪ್ರಕಟಿಸಿ, ಬಾಧಿತರಾದ ವೈದ್ಯರುಗಳಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು.

ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ಸಂಬಂಧಿಸಿದಂತೆ ಯಾವುದೇ ಆಕ್ಷೇಪಣೆ/ ಸಲಹೆಗಳು ಸ್ವೀಕೃತವಾಗಿರುವುದಿಲ್ಲ. ಆದ್ದರಿಂದ ದಿನಾಂಕ:01.01.2009ರಲ್ಲಿದ್ದಂತೆ ಹಿರಿಯ ದಂತ ಆರೋಗ್ಯಾಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಅನುಬಂಧದಲ್ಲಿರುವಂತೆ ಪರಿಗಣಿಸಿ ಸಂಬಂಧಪಟ್ಟ ಎಲ್ಲರ ಮಾಹಿತಿಗಾಗಿ ಪ್ರಕಟಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

**ಅಧಿಸೂಚನೆ ಸಂಖ್ಯೆ: ಆಕುಕ 30 ಹೆಚ್‌ಎಸ್‌ಡಿ 2009, ದಿನಾಂಕ:04.06.2010ಕ್ಕೆ ಅನುಬಂಧ**

**(ದಿನಾಂಕ:01.01.2009ರಲ್ಲಿದ್ದಂತೆ ಹಿರಿಯ ದಂತ ಆರೋಗ್ಯಾಧಿಕಾರಿಗಳ ಜೇಷ್ಠತಾ ಪಟ್ಟಿ)**

| ಕ್ರ. ಸಂ. | ಹಿರಿಯ ದಂತ ಆರೋಗ್ಯಾಧಿಕಾರಿ ಹೆಸರು | ಹುಟ್ಟಿದ ದಿನಾಂಕ | ದಂತ ಆರೋಗ್ಯಾಧಿಕಾರಿಯಾಗಿ ಕರ್ತವ್ಯಕ್ಕೆ ಸೇರಿದ ದಿನಾಂಕ | ಹಿರಿಯ ದಂತ ಆರೋಗ್ಯಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿರುವ ದಿನಾಂಕ |
|---|---|---|---|---|
| 1. | ಡಾ: ಎಂ.ಪಿ. ಗಿರಿಜ | 28.02.1961 | 23.10.1986 | 12.09.1996 |
| 2. | ಡಾ: ನೌಸಿರ್ ಅಹ್ಮದ್ | 01.01.1968 | 24.04.1993 | 12.09.1996 |
| 3. | ಡಾ: ಕುಬೇರಪ್ಪ | 01.06.1959 | 08.03.1993 | 09.03.1999 |
| 4. | ಡಾ: ಸೋಮಶೇಖರಪ್ಪ | 14.05.1960 | 08.04.1993 | 09.04.1999 |
| 5. | ಡಾ: ಕೆ. ರವಿಕುಮಾರ್ | 01.05.1968 | 19.04.1993 | 19.04.1999 |
| 6. | ಡಾ: ಕಮಲ್ ಶರೀಫ್ | 20.07.1963 | 03.05.1993 | 04.05.1999 |
| 7. | ಡಾ: ಜಿ.ಆರ್. ಸುಧಾ | 13.07.1966 | 17.05.1993 | 18.05.1999 |
| 8. | ಡಾ: ಕೆ. ಜಗದೀಶ್ | 06.10.1960 | 08.04.1993 | 23.11.2000 |

**ಐ. ಹೇಮನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು–1)

ಪಿ.ಆರ್.914

## ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಕೋಲಾರ

## ಅಧಿಸೂಚನೆ

### ಸಂಖ್ಯೆ: ಸಿಬ್ಬಂದಿ(1)28/2010–11, ದಿನಾಂಕ:28ನೇ ಮೇ, 2010

**ವಿಷಯ:** ಡಾ: ರಂಗರಾವ್ ಎಂ.ಆರ್. ಶಸ್ತ್ರಚಿಕಿತ್ಸಾ ತಜ್ಞರು, ಸಾಆ–ಶ್ರೀನಿವಾಸಪುರ ಇವರಿಗೆ ಗಳಿಕೆ ರಜೆಯ ನಗದೀಕರಣ ಮಂಜೂರು ಮಾಡುವ ಬಗ್ಗೆ.

ಡಾ: ರಂಗರಾವ್ ಎಂ.ಆರ್. ಶಸ್ತ್ರಚಿಕಿತ್ಸಾ ತಜ್ಞರು, ಸಾಆ–ಶ್ರೀನಿವಾಸಪುರ ಇವರಿಗೆ ದಿನಾಂಕ:01.06.2010 ರಿಂದ 30.06.2010 ರವರಿಗೆ (ಎದಿಸೇ) 30 ದಿನಗಳ ಗಳಿಕೆ ರಜೆಯನ್ನು 2009–10ನೇ ಸಾಲಿಗೆ ಬ್ಲಾಕ್ ಅವಧಿಯನ್ನು ನಗದೀಕರಣಗೊಳಿಸಲು ಹಾಗೂ ಮಹಾಲೇಖಪಾಲಕರು, ಬೆಂಗಳೂರು ಇವರ ಪತ್ರದ ಸಂಖ್ಯೆ: ಜಿಇ–7/ಎಂ–8/ಆರ್–2ಎ/146 ದಿನಾಂಕ:25.05.2010ರ ಪ್ರಕಾರ ಮಂಜೂರು ಮಾಡಲಾಗಿದೆ.

ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಅಧಿಕಾರಿಗಳು, ಕೋಲಾರ.

ಪಿ.ಆರ್.918

## ಭೂ ದಾಖಲೆಗಳ ಜಂಟಿ ನಿರ್ದೇಶಕರು, ಮರುಭೂಮಾಪನ, ಬೆಳಗಾವಿ

## ಅಧಿಸೂಚನೆ

### ಸಂಖ್ಯೆ: ಮರುಭೂಮಾಪನ:ನೋ–14/2010–11, ದಿನಾಂಕ:22ನೇ ಮೇ, 2010

ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 106 ಹಾಗೂ ಘನ ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಕಂ.ಇ.29/ಭೂದಾಸ/2009, ದಿನಾಂಕ:20.02.2009ರ ಮೇರೆಗೆ 109, 112 ಹಾಗೂ 152ರಲ್ಲಿ ನಿಹಿತವಾದ ಅಧಿಕಾರದ ಮೇರೆಗೆ ಬೆಳಗಾವಿ ಜಿಲ್ಲೆಯ ಬೆಳಗಾವಿ ತಾಲ್ಲೂಕಿನ ಈ ಕೆಳಕಂಡ ಗ್ರಾಮದಲ್ಲಿ ಮರುಭೂಮಾಪನ ಹಾಗೂ ಮರುಭೂವರ್ಗೀಕರಣ ಕಾರ್ಯವನ್ನು ಕೈಗೆತ್ತಿಕೊಳ್ಳಲಾಗಿದೆ.

ಮೇಲ್ಕಂಡ ಯೋಜನೆಯಲ್ಲಿ ಬರತಕ್ಕ ಗ್ರಾಮದ ಎಲ್ಲಾ ಹಿಡುವಳಿದಾರರು/ ಮಾಲೀಕರು ಅಳತೆಗೆ ಬರತಕ್ಕ ಮೋಜಣಿದಾರರಿಗೆ ಅಗತ್ಯ ಸಹಾಯವನ್ನು (ಕೂಲಿಗಳನ್ನು ಒದಗಿಸುವುದು ಇತ್ಯಾದಿ) ಪೂರೈಸತಕ್ಕದ್ದು.

ಭೂದಾಖಲೆಗಳ ಜಂಟಿ ನಿರ್ದೇಶಕರು,
ಮರುಭೂಮಾಪನ, ಬೆಳಗಾವಿ.

| ಅ. ನಂ. | ತಾಲ್ಲೂಕು | ಹೋಬಳಿ | ಗ್ರಾಮಗಳ ಹೆಸರು |
|---|---|---|---|
| 1. | ಬೆಳಗಾವಿ | ಕಾಕತಿ | ಚೆಲುವೇನಟ್ಟಿ |

**ಷರಾ:** ಭೂಮಾಪನ ತಂಡವು ಆಯಾ ಗ್ರಾಮಗಳಲ್ಲಿ ಬರತಕ್ಕ ಸರ್ಕಾರಿ ನಂಬರುಗಳನ್ನು ಅಳತೆ ಮಾಡಿ ಸುತ್ತೋಲೆಯಂತೆ ದಾಖಲೆಗಳನ್ನು ತಯಾರಿಸುವುದು.

ಭೂದಾಖಲೆಗಳ ಜಂಟಿ ನಿರ್ದೇಶಕರು,
ಪಿ.ಆರ್.919 ಮರುಭೂಮಾಪನ, ಬೆಳಗಾವಿ.

## ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಮುಖ್ಯ ಇಂಜಿನೀಯರವರ ಕಛೇರಿ, ಸಣ್ಣ ನೀರಾವರಿ(ಉ) ವಲಯ, ಬಿಜಾಪುರ

## ಅಧಿಸೂಚನೆ

**ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಮಾ.ಹ/ಸಿ–2/10–11/3071, ದಿನಾಂಕ:21ನೇ ಮೇ, 2010**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ:68:ಸೇಇಮು:2010 ಬೆಂಗಳೂರು, ದಿನಾಂಕ:24.04.2010ರನ್ವಯ ಶ್ರೀ ಎಸ್.ಬಿ. ಸಿದ್ದಗಂಗಪ್ಪ, ಮುಖ್ಯ ಇಂಜಿನೀಯರ್ ಇವರನ್ನು ವರ್ಗಾವಣೆಯ ಮೇರೆಗೆ ಸಣ್ಣ ನೀರಾವರಿ (ಉ) ವಲಯ, ಬಿಜಾಪುರ ಕಾರ್ಯಾಲಯಕ್ಕೆ ಮುಖ್ಯ ಇಂಜಿನೀಯರ್' ಎಂದು ಸ್ಥಳ ನೇಮಕ ಮಾಡಿದ ಪ್ರಯುಕ್ತ ಇವರು ದಿನಾಂಕ:26.04.2010ರ ಪೂರ್ವಾಹ್ನದಂದು ಈ ವಲಯ ಕಛೇರಿಯ ಪ್ರಭಾರವನ್ನು ವಹಿಸಿಕೊಂಡ ಪ್ರಯುಕ್ತವಾಗಿ ಈ ಕಾರ್ಯಾಲಯದಲ್ಲಿ ಮೇಲ್ಮನವಿ ಪ್ರಾಧಿಕಾರಿಗಳನ್ನಾಗಿ ಮಾಹಿತಿ ಹಕ್ಕು ಅಧಿನಿಯಮ–2005ರಡಿಯಲ್ಲಿಯ ಸೆಕ್ಷನ್ 19(1) ಪ್ರಕಾರವಾಗಿ ಈ ಕೆಳಗಿನಂತೆ ಅಧಿಸೂಚನೆ ಹೊರಡಿಸಲಾಗಿದೆ.

| ಕ್ರಮ ಸಂಖ್ಯೆ | ಕಛೇರಿಯ ಹೆಸರು | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19(1) | ಷರಾ |
|---|---|---|---|
| 1. | ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ (ಉ) ವಲಯ, ಬಿಜಾಪುರ. | ಶ್ರೀ ಎಸ್.ಬಿ. ಸಿದ್ಧಗಂಗಪ್ಪ, ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ (ಉ) ವಲಯ, ಬಿಜಾಪುರ. | – |

**ಎಸ್.ಬಿ. ಸಿದ್ದಗಂಗಪ್ಪ**
ಪಿ.ಆರ್.924 ಮುಖ್ಯ ಇಂಜಿನೀಯರರು,
ಸಣ್ಣ ನೀರಾವರಿ (ಉ) ವಲಯ, ಬಿಜಾಪುರ.

## ಶಿವಮೊಗ್ಗ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯದ ನಡವಳಿಕೆ

**ವಿಷಯ:** ಶಿವಮೊಗ್ಗ ನಗರ ಪರಿಮಿತಿ ತುಮಕೂರು–ಹೊನ್ನಾವರ ರಸ್ತೆಯ ಅಮೀರ್ ಅಹ್ಮದ್ ವೃತ್ತದಿಂದ ಕಾನ್ವೆಂಟ್ ವೃತ್ತದವರೆಗೆ ಕಾಂಕ್ರೆಟ್ ರಸ್ತೆ ನಿರ್ಮಾಣಕ್ಕಾಗಿ ದಿನಾಂಕ:01.06.2010 ರಿಂದ 31.07.2010ರ ವರೆಗೆ ಎಲ್ಲಾ ವಾಹನಗಳ ಸಂಚಾರವನ್ನು ನಿರ್ಬಂಧಿಸುವ ಕುರಿತು.

**ಉಲ್ಲೇಖ:** 1) ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಮತ್ತು ಒಳನಾಡು ಜಲಸಾರಿಗೆ ಇಲಾಖೆ, ವಿಶೇಷ ವಿಭಾಗ, ಶಿವಮೊಗ್ಗ ಇವರ ಪತ್ರ ಸಂಖ್ಯೆ: ಕಾಂ.ಇಂ/ಲೋ.ಇ./ವಿವಿಶಿ/ತು–ಹೊ–ರಸ್ತೆ ವಾಹನ ಸಂಚಾರ/2010–11, ದಿನಾಂಕ:28.05.2010.

ವರದಿ ದಿನಾಂಕ:18.09.2001 ಮತ್ತು 28.07.2005.

**ಪ್ರಸ್ತಾವನೆ:**

ಮಾನ್ಯ ಜಿಲ್ಲಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಹಾಗೂ ಜಿಲ್ಲಾ ರಕ್ಷಣಾಧಿಕಾರಿಗಳು, ಶಿವಮೊಗ್ಗ ಅಧೀಕ್ಷಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗ ಇವರೊಂದಿಗೆ ದಿನಾಂಕ:28.05.2010ರಂದು ನಡೆದ ಸಭೆಯಲ್ಲಿ, ಶಿವಮೊಗ್ಗ ನಗರ ಪರಿಮಿತಿಯ ಅಮೀರ್ ಅಹ್ಮದ್ ವೃತ್ತದಿಂದ ಕಾನ್ವೆಂಟ್ ವೃತ್ತದವರೆಗೆ ಕಾಂಕ್ರೀಟ್ ರಸ್ತೆ ನಿರ್ಮಾಣ ಪ್ರಗತಿಯಲ್ಲಿದ್ದು, ಈ ಭಾಗದಲ್ಲಿ ವಾಹನ ಸಂಚಾರವನ್ನು ನಿರ್ಬಂಧಿಸುವ ಸಂಬಂಧ ಸ್ಥಳ ಪರಿಶೀಲನೆ ಸಂದರ್ಭದಲ್ಲಿ ವಾಹನ ಸಂಚಾರವನ್ನು ಸಂಪೂರ್ಣ ನಿರ್ಬಂಧಿಸುವುದು ಹಾಗೂ ಕಾಮಗಾರಿಯ ತ್ವರಿತಗತಿಯಲ್ಲಿ ಸಾಗಲು ಅನಿವಾರ್ಯವೆಂದು ತೀರ್ಮಾನಿಸಿರುವುದರಿಂದ ದಿನಾಂಕ:01.06.2010 ರಿಂದ 31.07.2010ರವರೆಗೆ ಅಮೀರ್ ಅಹ್ಮದ್ ವೃತ್ತದಿಂದ ಕಾನ್ವೆಂಟ್ ವೃತ್ತದವರೆಗೆ ಎಲ್ಲಾ ರೀತಿಯ ವಾಹನಗಳ ಸಂಚಾರವನ್ನು ನಿರ್ಬಂಧಿಸಲು ತೀರ್ಮಾನಿಸಿದ್ದು, ಪರ್ಯಾಯ ವ್ಯವಸ್ಥೆಯನ್ನು ಸಹ ನೀಲಿ ನಕಾಶೆಯಲ್ಲಿ ಸೂಚಿಸಿದಂತೆ ವಾಹನಗಳ ಸುಗಮ ಸಂಚಾರಕ್ಕೆ ಪರ್ಯಾಯ ವ್ಯವಸ್ಥೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಕಲ್ಪಿಸಿಕೊಡುವ ಸಂಬಂಧ ಮೋ.ವಾ.ಕಾ.1988ರ ಸೆಕ್ಷನ್ 115 ರಲ್ಲಿ ಅಧಿಸೂಚನೆ ಹೊರಡಿಸಲು ನಿರ್ಣಯಿಸಲಾಗಿರುತ್ತದೆ. ಆ ಪ್ರಕಾರ ಈ ಕೆಳಗಿನಂತೆ ಆದೇಶ ನೀಡಲಾಗಿದೆ.

**ಆದೇಶ**

**ನಂ.ಪ್ರಾಸಾಪ್ರಾ/ಶಿ/ಅಧಿಸೂಚನೆ/10–11, ದಿನಾಂಕ:29ನೇ ಮೇ, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ ಪಂಕಜ್ ಕುಮಾರ ಪಾಂಡೆ, ಭಾ.ಆ.ಸೇ., ಜಿಲ್ಲಾ ದಂಡಾಧಿಕಾರಿ ಹಾಗೂ ಜಿಲ್ಲಾಧಿಕಾರಿ, ಶಿವಮೊಗ್ಗ ಆದ ನಾನು ಕೇಂದ್ರ ಮೋಟಾರು ವಾಹನ ಕಾಯ್ದೆ 1988ರ ಸೆಕ್ಷನ್ 115 ಹಾಗೂ ಕರ್ನಾಟಕ ಮೋಟಾರು ವಾಹನಗಳ ನಿಯಮಾವಳಿಗಳು 1989ರ ನಿಯಮ 221(ಎ)(5)ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶಿವಮೊಗ್ಗ ನಗರ ಪರಿಮಿತಿಯ ಅಮೀರ್ ಅಹ್ಮದ್ ವೃತ್ತದಿಂದ ಕಾನ್ವೆಂಟ್ ವೃತ್ತದವರೆಗೆ ಎಲ್ಲಾ ಬಗೆಯ ವಾಹನಗಳ ಸಂಚಾರವನ್ನು ದಿನಾಂಕ:01.06.2010ರಿಂದ 31.07.2010ರ ವರೆಗೆ ಸಂಪೂರ್ಣವಾಗಿ ನಿರ್ಬಂಧಿಸಲಾಗಿದೆ. ಇದಕ್ಕೆ ಪರ್ಯಾಯವಾದ ಮಾರ್ಗ ಕೆಳಗಿನಂತಿದೆ.

1) ಬಸ್‌ಸ್ಟ್ಯಾಂಡ್ ಕಡೆಯಿಂದ ಅಮೀರ್ ಅಹ್ಮದ್ ವೃತ್ತದ ಮೂಲಕ ಬರುವ ವಾಹನಗಳು ನೆಹರು ರಸ್ತೆ, ಬಾಲರಾಜ ಅರಸ ರಸ್ತೆ, ಮಹಾವೀರ ವೃತ್ತ, ಡಿ.ವಿ.ಎಸ್. ಕಾಲೇಜ್ ರಸ್ತೆ ಮೂಲಕ ಬಸವೇಶ್ವರ ವೃತ್ತದವರೆಗೆ ದ್ವಿಮುಖ ಸಂಚಾರ.

2) ಬಸವೇಶ್ವರ ವೃತ್ತದಿಂದ ವೀರಭದ್ರ ಟಾಕೀಸ್ ರಸ್ತೆ ಮೂಲಕ ಬಿ.ಹೆಚ್. ರಸ್ತೆ ಸೇರುವುದು ಏಕಮುಖ ಸಂಚಾರ.

3) ಶಂಕರಮಠ ವೃತ್ತದಿಂದ ಬಿ.ಹೆಚ್. ರಸ್ತೆಗೆ ಪ್ರವೇಶಿಸುವ ವಾಹನಗಳು ಕಾನ್ವೆಂಟ್ ವೃತ್ತದವರೆಗೆ ದ್ವಿಮುಖ ಸಂಚಾರಕ್ಕೆ ಅವಕಾಶವಿದ್ದು, ಕಾನ್ವೆಂಟ್ ವೃತ್ತದಿಂದ ಕಾನ್ವೆಂಟ್ ರಸ್ತೆ ಮೂಲಕ ಬಸವೇಶ್ವರ ಸರ್ಕಲ್ ವರೆಗೆ ಏಕ ಮುಖ ಸಂಚಾರವನ್ನು ಕಲ್ಪಿಸಿದೆ.

**ಪಂಕಜ್ ಕುಮಾರ್ ಪಾಂಡೆ**

ಪಿ.ಆರ್.925 ಜಿಲ್ಲಾ ದಂಡಾಧಿಕಾರಿ ಹಾಗೂ ಜಿಲ್ಲಾಧಿಕಾರಿ, ಶಿವಮೊಗ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪನಿಬಂಧಕರ ಕಾರ್ಯಾಲಯ, ಬೀದರ್ ಜಿಲ್ಲೆ, ಬೀದರ್**

**ವಿಷಯ:** ಶ್ರೀ ವೀರಭದ್ರೇಶ್ವರ ಶಿಕ್ಷಣ ಸಂಸ್ಥೆ ನೌಕರರ ಪತ್ತಿನ ಸಹಕಾರ ಸಂಘ ನಿ., ಹುಮನಾಬಾದ್ ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ರವರ ಪತ್ರಸಂಖ್ಯೆ:ಸನಿಬಿ1/ವಿ7/ಸಮಾಪನೆ/ 2010–11/ 259/ದಿನಾಂಕ:30.04.2010.

**ಪೀಠಿಕೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ರವರ ಪತ್ರ ಸಂಖ್ಯೆ:ಸನಿಬಿ1/ವಿ7/ಸಮಾಪನೆ/2010–11 ದಿನಾಂಕ:30.04.2010ರನ್ವಯ ಸ್ಥಗಿತಗೊಂಡಿರುವ ಶ್ರೀ ವೀರಭದ್ರೇಶ್ವರ ಶಿಕ್ಷಣ ಸಂಸ್ಥೆ ನೌಕರರ ಪತ್ತಿನ ಸಹಕಾರ ಸಂಘ ನಿ., ಹುಮನಾಬಾದ ಇದರ ಕಾರ್ಯವು ಸಂಪೂರ್ಣವಾಗಿ ದಿನಾಂಕ:27.08.2009 ರಿಂದ ಸ್ಥಗಿತಗೊಂಡಿದ್ದು, ಯಾವುದೇ ವ್ಯವಹಾರವನ್ನು ಕೈಗೊಂಡಿರುವುದಿಲ್ಲವೆಂದು ಹಾಗೂ ವರ್ಷ 2010–11 ರಿಂದ 2014–15ನೇ ಸಾಲಿನ ಆಡಳಿತ ಮಂಡಳಿ ಚುನಾವಣೆಯನ್ನು ಜರುಗಿಸಲು ವಿಫಲನಾದ ಕಾರಣ ಮತ್ತು ಪುನಶ್ಚೇತನಗೊಳಿಸಲು ಯಾವ ಸದಸ್ಯರು ಆಸಕ್ತಿ

ವಹಿಸುತ್ತಿಲ್ಲವೆಂದು ಕೋರುತ್ತಾ ಸದರಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿಗಳು ಹುಮನಾಬಾದ ಇವರನ್ನು ಸಮಾಪನೆ ಅಧಿಕಾರಿಯನ್ನಾಗಿ ನೇಮಕ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಶ್ರೀ ವೀರಭದ್ರೇಶ್ವರ ಶಿಕ್ಷಣ ಸಂಸ್ಥೆ ನೌಕರರ ಪತ್ತಿನ ಸಹಕಾರ ಸಂಘ ನಿ., ಹುಮನಾಬಾದ ಇದರ ನೋಂದಣಿ ಸಂಖ್ಯೆ: ಸನಿಬಿ1/ವಿ9/ಜಿಎಚ್ಒ/23882/95–96/ ದಿನಾಂಕ:04.03.1996 ರನ್ವಯ ನೋಂದಣಿಯಾಗಿದ್ದು, ಸಂಘದ ಕಾರ್ಯವ್ಯಾಪ್ತಿಯು ಪ್ರಾಥಮಿಕ ಮಟ್ಟದಾಗಿರುತ್ತದೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ಹಾಗೂ ಸರಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21.11.2001ರನ್ವಯ ಉಪ ನಿಬಂಧಕರು, ಸಹಕಾರ ಸಂಘಗಳು ಬೀದರರವರಿಗೆ ಅಧಿಕಾರ ದತ್ತವಾಗಿರುತ್ತದೆ. ಆದಕಾರಣ ಈ ಕೆಳಗಿನ ಆದೇಶವನ್ನು ಮಾಡಲಾಗಿದೆ.

**ಆದೇಶ**

**ಸಂಖ್ಯೆ: ಉನಿಬಿ/ವಿ2/ಸಮಾಪನೆ/2010–11/408, ದಿನಾಂಕ:25ನೇ ಮೇ, 2010**

ಪೀಠಿಕೆಯಲ್ಲಿರುವ ಅಂಶಗಳಿಗೆ ಅನುಗುಣವಾಗಿ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸುತ್ತಾ ನಾನು ಚವ್ಹಾಣ ಗೋಪಾಲ, ಉಪನಿಬಂಧಕರು, ಸಹಕಾರ ಸಂಘಗಳು ಬೀದರ್ ಸ್ಥಗಿತಗೊಂಡಿರುವ ಶ್ರೀ ವೀರಭದ್ರೇಶ್ವರ ಶಿಕ್ಷಣ ಸಂಸ್ಥೆ ನೌಕರರ ಪತ್ತಿನ ಸಹಕಾರ ಸಂಘ ನಿ., ಹುಮನಾಬಾದ ಇದನ್ನು ಸಮಾಪನೆಗೊಳಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿಗಳು ಹುಮನಾಬಾದ್ ಇವರನ್ನು ಸಮಾಪನೆ ಅಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.

ಸಮಾಪನೆ ಅಧಿಕಾರಿಗಳು ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 74 ಹಾಗೂ ನಿಯಮ 1960ರ ನಿಯಮ 33ರ ನಿರ್ದೇಶನದನ್ವಯ ಸದರಿ ಸಂಘದ ಪ್ರಭಾರವನ್ನು ಪಡೆದು ಸಂಘದ ಆಸ್ತಿ–ಜವಾಬ್ದಾರಿ ವಿಲೇವಾರಿಗೊಳಿಸಲು ಆಧ್ಯತೆ ಪಟ್ಟಿ ಸಲ್ಲಿಸಿ ಅನುಮೋದನೆ ಪಡೆದು ಆಸ್ತಿ–ಜವಾಬ್ದಾರಿ ವಿಲೇವಾರಿಗೊಳಿಸಿ ನೋಂದಣಿ ಸಂಖ್ಯೆ: ರದ್ಧತಿಗಾಗಿ ಈ ಆದೇಶದ 30 ದಿವಸಗಳ ಒಳಗಡೆ ಪ್ರಸ್ತಾವನೆ ಸಲ್ಲಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ಇಂದು ದಿನಾಂಕ:27.05.2010ರಂದು ಜಾರಿ ಮಾಡಲಾಗಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಬೀದರ್ ಜಿಲ್ಲೆ, ಬೀದರ್.

ಪಿ.ಆರ್.926

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು**

**ಇವರ ನ್ಯಾಯಾಲಯದ ನಡವಳಿಗಳು**

**ದಾವಾ ಸಂಖ್ಯೆ:02/2010–11**

| **ವಾದಿಗಳು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| ಪ್ರಭಾರ ಕಾರ್ಯದರ್ಶಿ, ದೊಡ್ಡ ಪ್ರಮಾಣದ ಕೃಷಿ ಪತ್ತಿನ ಸಹಕಾರ ಸಂಘ ನಿ., ದೊಡ್ಡನಾರವಂಗಲ, ತುಮಕೂರು ತಾಲ್ಲೂಕು. | | 1) ಶ್ರೀ ಎಲ್.ಎನ್. ಪಾರ್ಥಸಾರಥಿ, ಮಾಜಿ ಕಾರ್ಯದರ್ಶಿ, ದೊಡ್ಡ ಪ್ರಮಾಣದ ಕೃಷಿ ಪತ್ತಿನ ಸಹಕಾರ ಸಂಘ ನಿಯಮಿತ, ದೊಡ್ಡನಾರವಂಗಲ, ತುಮಕೂರು.<br>**ಕಾನೂನು ವಾರಸುದಾರರು:**<br>ಶ್ರೀಮತಿ ಶಾಂತಮ್ಮ ಕೋಂ ಲೇ: ಎಲ್.ಎನ್. ಪಾರ್ಥಸಾರಥಿ, 2ನೇ ಕ್ರಾಸ್, ದ.ರಾ.ಬೇಂದ್ರೆ ರಸ್ತೆ, ಸರಸ್ವತಿ ಪುರಂ, ಮರಳೂರು, ತುಮಕೂರು.<br>2) ಶ್ರೀ ಎಲ್.ಪಿ. ಆನಂದ್ ಬಿನ್ ಲೇ: ಎಲ್.ಎನ್. ಪಾರ್ಥಸಾರಥಿ, 2ನೇ ಕ್ರಾಸ್, ದ.ರಾ.ಬೇಂದ್ರೆ ರಸ್ತೆ, ಸರಸ್ವತಿ ಪುರಂ, ಮರಳೂರು, ತುಮಕೂರು. |

**ವಿಷಯ:** ತುಮಕೂರು ಜಿಲ್ಲೆ, ತುಮಕೂರು ತಾಲ್ಲೂಕು ದೊಡ್ಡಪ್ರಮಾಣದ ಕೃಷಿ ಪತ್ತಿನ ಸಹಕಾರ ಸಂಘ ನಿಯಮಿತ, ದೊಡ್ಡನಾರವಂಗಲ ಇದರಲ್ಲಿ ನಡೆದಿರುವ ಹಣದುರುಪಯೋಗದ ಬಗ್ಗೆ ಮಾಜಿ ಕಾರ್ಯದರ್ಶಿಯಾದ ಶ್ರೀ ಎಲ್.ಎನ್. ಪಾರ್ಥಸಾರಥಿ (ಪವತಿ) ಇವರ ಹೆಸರಿನಲ್ಲಿ ಮತ್ತು ಅವರ ಕಾನೂನು ವಾರಸುದಾರರಾದ ಪತ್ನಿ ಹಾಗೂ ಮಗನ ಹೆಸರಿನಲ್ಲಿ ಜಂಟಿಯಲ್ಲಿರುವ ಸ್ಥಿರಾಸ್ತಿಯನ್ನು ಸಹಕಾರಿ ಕಾಯ್ದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಆದೇಶ ಮಾಡುವ ಬಗ್ಗೆ.

**ಉಲ್ಲೇಖ:** 1) ಸಂಘದ ಪ್ರಭಾರ ಕಾರ್ಯದರ್ಶಿಯವರ ಪತ್ರ ದಿನಾಂಕ:01.06.2010.

2) ದಿನಾಂಕ:01.06.2010ರಂದು ಈ ನ್ಯಾಯಾಲಯದಲ್ಲಿ ದಾಖಲಾಗಿರುವ ಅಧಿಭಾರ ಅರ್ಜಿ ಸಂಖ್ಯೆ:2/2010–11.

**ಪ್ರಸ್ತಾವನೆ:**

ಶ್ರೀ ಎಲ್.ಎನ್. ಪಾರ್ಥಸಾರಥಿ (ಪವತಿ) ರವರು ಕಾರ್ಯದರ್ಶಿಯಾಗಿ ದಿನಾಂಕ:12.05.2010ರ ವರೆಗೆ ದೊಡ್ಡ ಪ್ರಮಾಣದ ಕೃಷಿ ಪತ್ತಿನ ಸಹಕಾರ ಸಂಘ ನಿಯಮಿತ, ದೊಡ್ಡನಾರವಂಗಲ, ತುಮಕೂರು ತಾಲ್ಲೂಕು, ಇದರಲ್ಲಿ ಕೆಲಸ ನಿರ್ವಹಿಸಿರುತ್ತಾರೆ. ಇವರು ಸದರಿ ಸಂಘದಲ್ಲಿ ರೂ.1571870–00ಗಳ ಸಂಘದ ಹಣವನ್ನು ದುರುಪಯೋಗ ಮಾಡಿರುವುದು ಸಂಘದ 2008–09ನೇ ಸಾಲಿನ ಮಧ್ಯಂತರ ಲೆಕ್ಕಪರಿಶೋಧನಾ ವರದಿಯಿಂದ ಕಂಡು ಬಂದಿದೆ.

ಈ ರೀತಿಯ ದುರುಪಯೋಗದ ಹಣದ ವಸೂಲಾತಿಗಾಗಿ ಸಂಘದ ಪ್ರಭಾರ ಕಾರ್ಯದರ್ಶಿಯವರು ಉಲ್ಲೇಖ (2)ರ ರೀತ್ಯಾ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69ರಡಿ ಅಧಿಭಾರ ಅರ್ಜಿಯನ್ನು ದಿನಾಂಕ:01.06.2010ರಂದು ದಾಖಲು ಮಾಡಿರುತ್ತಾರೆ.

ಉಲ್ಲೇಖ (1)ರ ಪತ್ರದೊಂದಿಗೆ ಸಂಘದ ಪ್ರಭಾರ ಕಾರ್ಯದರ್ಶಿ (ವಾದಿ) ದಾವೆಯಲ್ಲಿ ಪ್ರಮಾಣ ಪತ್ರವನ್ನು ಸಲ್ಲಿಸಿ ಪ್ರತಿವಾದಿಗಳು ದುರುಪಯೋಗ ಪಡಿಸಿದ ಹಣ ರೂ.15,71870–00 ಮತ್ತು ಬಡ್ಡಿ ಸಮೇತ ವಸೂಲಿ ಕುರಿತು ಹಣದ ಭದ್ರತೆಗಾಗಿ ದಾವೆಯ ಅಂತಿಮ ಫಲಿತಾಂಶವನ್ನು ಕಾಯ್ದಿರಿಸಿ, ಸದರಿ ಪ್ರತಿವಾದಿಗಳು ಶ್ರೀ ಎಲ್.ಎನ್. ಪಾರ್ಥಸಾರಥಿ (ಪವತಿ) ಹೆಸರಿನಲ್ಲಿ ಮತ್ತು ಅವರ ಹಕ್ಕುಬದ್ಧ ಕಾನೂನು ವಾರಸುದಾರರಾದ ಪತ್ನಿ ಮತ್ತು ಮಗನ ಹೆಸರಿನಲ್ಲಿ ಜಂಟಿ ಇರುವ ಸ್ಥಿರಾಸ್ತಿಗಳನ್ನು ಸಹಕಾರಿ ಕಾಯ್ದೆ 1959ರ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಆದೇಶ ನೀಡಬೇಕಾಗಿ ಕೋರಿರುತ್ತಾರೆ. ಆದುದರಿಂದ ಈ ನ್ಯಾಯಾಲಯವು ವಿಚಾರಣೆಗಾಗಿರುವ ಅಧಿಭಾರ ಅರ್ಜಿ ಸಂಖ್ಯೆ: 02/2010–11ನ್ನು ಅಂತಿಮ ತೀರ್ಪು ಕಾಯ್ದಿರಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರನ್ವಯ ಈ ನ್ಯಾಯಾಲಯದಲ್ಲಿರುವ ದಾವೆಯ ತೀರ್ಪು ಪೂರ್ವ, ಷೆಡ್ಯೂಲ್‌ನಲ್ಲಿನ ಸ್ಥಿರಾಸ್ತಿಗಳನ್ನು ಜಪ್ತಿ ಮಾಡಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ: ಸನಿ–32/ದಾವಾ/ಕಲಂ103/18/2010–11, ದಿನಾಂಕ:2ನೇ ಜೂನ್, 2010**

ಶ್ರೀ ಕೆ. ಗೋಪಾಲರೆಡ್ಡಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಆದ ನಾನು ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001, ದಿನಾಂಕ:21.11.2001ರಲ್ಲಿ ಪ್ರತ್ಯಾಯೋಜಿಸಿರುವ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರ ಪ್ರಕಾರ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಎಲ್.ಎನ್. ಪಾರ್ಥಸಾರಥಿ ಮಾಜಿ ಕಾರ್ಯದರ್ಶಿ (ಪವತಿ) ಇವರ ಹೆಸರಿನಲ್ಲಿ ಹಾಗೂ ಇವರ ಪತ್ನಿ ಶ್ರೀಮತಿ ಶಾಂತಮ್ಮ ಕೋಂ ಲೇ: ಎಲ್.ಎನ್. ಪಾರ್ಥಸಾರಥಿ ಮತ್ತು ಇವರ ಮಗ ಶ್ರೀ ಎಲ್.ಪಿ. ಆನಂದ್ ಬಿನ್ ಲೇ: ಎಲ್.ಎನ್. ಪಾರ್ಥಸಾರಥಿ ಇವರುಗಳ ಹೆಸರಿನಲ್ಲಿರುವ ಷೆಡ್ಯೂಲ್‌ನಲ್ಲಿನ ಸ್ಥಿರಾಸ್ಥಿಗಳನ್ನು ಈ ನ್ಯಾಯಾಲಯದಲ್ಲಿ ವಿಚಾರಣೆಗಾಗಿ ಇರುವ ದಾವೆಯ ಅಂತಿಮ ತೀರ್ಪಿಗೆ ಒಳಪಟ್ಟು ಈ ಆದೇಶ ಪೂರ್ವ ಜಪ್ತಿ ಹೊರಡಿಸಿರುತ್ತೇನೆ.

ಇವರುಗಳು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೆ ಅಥವಾ ಸ್ವತ್ತುಗಳಿಗೆ ತತ್ಸಮಾನ ನಗದು ಭದ್ರತೆ ನೀಡುವವರೆಗೆ ವಿಲೇವಾರಿ ಮಾಡುವುದಾಗಲೀ ಪರಭಾರೆ ಮಾಡುವುದಾಗಲೀ ಅಥವಾ ವರ್ಗಾಯಿಸುವುದಾಗಲೀ ಮಾಡುವಂತಿಲ್ಲ. ಒಂದು ವೇಳೆ ಈ ಆದೇಶವನ್ನು ನಿರ್ಲಕ್ಷಿಸಿ ಮಾಡಿದರೂ ಈ ಸ್ವತ್ತು ಕೊಂಡಲ್ಲಿ ಅಥವಾ ಇನ್ನಾವುದೇ ವಿಧದಲ್ಲಿ ವರ್ಗಾಯಿಸಿಕೊಂಡಲ್ಲಿ ಅದು ಸಿಂಧುವಾಗಿರುವುದಿಲ್ಲ (ಸಕ್ರಮವಾಗಿರುವುದಿಲ್ಲ) ಎಂದು ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಲಾಗಿದೆ.

ದುರುಪಯೋಗದಾರರ ಕಾನೂನು ವಾರಸುದಾರರು, ಈ ಜಪ್ತಿ ಆದೇಶದ ವ್ಯಾಪ್ತಿಯಿಂದ ಹೊರಬರಲು ಇಚ್ಛಿಸಿದಲ್ಲಿ ಜಪ್ತಿಗೊಳಿಸಲ್ಪಟ್ಟ ಮೌಲ್ಯಕ್ಕೆ ತಕ್ಕಷ್ಟು ಮತ್ತು ನ್ಯಾಯಾಲಯವು ಸರಿ ಎಂದು ಭಾವಿಸುವ ತಕ್ಕಷ್ಟು ನಗದು ಭದ್ರತೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಹೆಸರಿನಲ್ಲಿ ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿಯಮಿತ, ತುಮಕೂರು, ಕೇಂದ್ರ ಕಛೇರಿ, ಈ ಬ್ಯಾಂಕಿನ ಅಮಾನತ್ ಖಾತೆಯಲ್ಲಿ ತೊಡಗಿಸಿ ಈ ಬಗ್ಗೆ ಮೂಲ ಚಲನ್ ಪ್ರತಿಯನ್ನು ದಿನಾಂಕ:30.06.2010ರಂದು ಅಥವಾ ಅದಕ್ಕಿಂತ ಮುಂಚಿತವಾಗಿ ಈ ನ್ಯಾಯಾಲಯಕ್ಕೆ ಹಾಜರು ಪಡಿಸುವುದರ ಮೂಲಕ ಈ ಜಪ್ತಿ ಆದೇಶದಿಂದ ಹೊರಗುಳಿಯಬಹುದೆಂದು ಸಹ ತಿಳಿಸಲಾಗಿದೆ. ಸದರಿ ನಿಗದಿತ ಅವಧಿಯೊಳಗೆ ನಗದು ಭದ್ರತೆ ನೀಡಲು ಪ್ರತಿವಾದಿಗಳು (ಎದುರುದಾರರು) ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತಿ ಆದೇಶ ಸ್ಥಿರಗೊಳ್ಳುವುದಲ್ಲದೆ ಖಾಯಂಗೊಳ್ಳುವುದು ಎಂದು ತಿಳಿಯತಕ್ಕದ್ದು.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಈ ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ:02.06.2010ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

**ಷೆಡ್ಯೂಲ್ ಸ್ವತ್ತುಗಳು**

| ಕ್ರ. ಸಂ. | ಖಾತೆದಾರರು/ ಹಕ್ಕುದಾರರ ಹೆಸರು ಮತ್ತು ವಿಳಾಸ | ಖಾತೆ ನಂ. ಅಸೆಸ್‌ಮೆಂಟ್ ನಂ. | ಸರ್ವೆ ನಂ. | ವಿಸ್ತೀರ್ಣ ಎ.ಗುಂ. | ತರಹೆ | ಚಕ್ಕುಬಂದಿ |
|---|---|---|---|---|---|---|
| 1. | ಎಲ್.ಎನ್.ಪಾರ್ಥಸಾರಥಿ, ಬಿನ್ ನರಸಿಂಹಯ್ಯ 45, 2ನೇ ಕ್ರಾಸ್, ದ.ರಾ.ಬೇಂದ್ರೆ ರಸ್ತೆ, ಸರಸ್ವತಿಪುರಂ, ಮರಳೂರು, ತುಮಕೂರು. | ವಾ.ನಂ.29 ಮು.ಖಾ.ನಂ. ಹಳೆಯದು 1953/1690 ಚಾಲ್ತಿ 1953/ಎ/1690 | ಮರಳೂರು ಗ್ರಾಮದ ಸ.ನಂ.44/1 ಎ.1.08 | ಪೂ.ಪ.30 ಅ.ಉ.ದ. 45 ಅ.10 ಚದರ ಆರ್.ಸಿ.ಸಿ. ಮನೆ | – | ಪೂರ್ವ:ಬೇರೆಯವರ ಮನೆ ಪಶ್ಚಿಮ: ರಸ್ತೆ ಉತ್ತರ:25ನೇ ನಂಬರ್ ಸೈಟ್ ನಲ್ಲಿ ಕಟ್ಟಿರುವ ಮನೆ. ದಕ್ಷಿಣ:23ನೇ ನಂಬರ್ ಸೈಟ್ ನಲ್ಲಿ ಕಟ್ಟಿರುವ ಮನೆ. |
| 2. | ಎಲ್.ಎನ್.ಪಾರ್ಥಸಾರಥಿ, ಬಿನ್ ನರಸಿಂಹಯ್ಯ, ಲಾಳನಕಟ್ಟೆ, ಕೊಂಡಜ್ಜಿ ಪೋಸ್ಟ್, ದಂಡಿನಶಿವರ ಹೋ: ತುರುವೇಕೆರೆ ತಾ: ಹಾಲಿವಾಸ; ಷೆರುಮನಹಳ್ಳಿ, ಬೆಳ್ಳಾವಿ ಹೋ: ತುಮಕೂರು ತಾಲ್ಲೂಕು. | ಖಾತಾ ನಂ.100 ಸೈಟ್ ನಂ.13 ಗ್ರಾಮ ಪೆರುಮನಹಳ್ಳಿ | – | ನಿವೇಶನ ಪೂ.ಪ.30 ಅ. ಉ.ದ.40ಅ | – | ಪೂರ್ವ:14ನೇ ನಂಬರ್ ಸೈಟ್ ಪಶ್ಚಿಮ:12ನೇ ನಂಬರ್ ಸೈಟು ಉತ್ತರ: ರಸ್ತೆ ದಕ್ಷಿಣ:26ನೇ ನಂಬರ್ ಸೈಟು |
| 3. | ಎಲ್.ಎನ್.ಪಾರ್ಥಸಾರಥಿ, ಬಿನ್ ನರಸಿಂಹಯ್ಯ, ಲಾಳನಕಟ್ಟೆ, ಕೊಂಡಜ್ಜಿ ಪೋಸ್ಟ್, ದಂಡಿನಶಿವರ ಹೋ: ತುರುವೇಕೆರೆ ತಾ: ಹಾಲಿವಾಸ; ಷೆರುಮನಹಳ್ಳಿ, ಬೆಳ್ಳಾವಿ ಹೋ: ತುಮಕೂರು ತಾಲ್ಲೂಕು. | – | 393/3 | 0.28.08 ಗುಂ. | ಖುಷ್ಕಿ | ಪೂರ್ವ:ಚನ್ನಮ್ಮ ಪಶ್ಚಿಮ:ಪುಟ್ಟಸ್ವಾಮಿ ಉತ್ತರ: ಜಯರಾಮ್ ದಕ್ಷಿಣ:ರಸ್ತೆ |

| ಕ್ರ. ಸಂ. | ಖಾತೆದಾರರು/ ಹಕ್ಕುದಾರರ ಹೆಸರು ಮತ್ತು ವಿಳಾಸ | ಖಾತೆ ನಂ. ಅಸೆಸ್‌ಮೆಂಟ್ ನಂ. | ಸರ್ವೆ ನಂ. | ವಿಸ್ತೀರ್ಣ ಎ.ಗುಂ. | ತರಹೆ | ಚಕ್ಕುಬಂದಿ |
|---|---|---|---|---|---|---|
| 4. | ಎಲ್.ಎನ್.ಪಾರ್ಥಸಾರಥಿ, ಬಿನ್ ನರಸಿಂಹಯ್ಯ, ಲಾಳನಕಟ್ಟೆ, ಕೊಂಡಜ್ಜಿ ಪೋಸ್ಟ್, ದಂಡಿನಶಿವರ ಹೋ: ತುರುವೇಕೆರೆ ತಾ: ಹಾಲಿವಾಸ; ಷೆರುಮನಹಳ್ಳಿ, ಬೆಳ್ಳಾವಿ ಹೋ: ತುಮಕೂರು ತಾಲ್ಲೂಕು. | – | 148/ ಪಿ 47 | 1.25 | – | ಪೂರ್ವ: ಕೆಂಪಮ್ಮ<br>ಪಶ್ಚಿಮ: ಮುದ್ದಮ್ಮ<br>ಉತ್ತರ: ಮಾರಯ್ಯ<br>ದಕ್ಷಿಣ: ಮಾಳಮ್ಮ |
| 5. | ಎಲ್.ಎನ್.ಪಾರ್ಥಸಾರಥಿ, ಬಿನ್ ನರಸಿಂಹಯ್ಯ, ಲಾಳನಕಟ್ಟೆ, ಕೊಂಡಜ್ಜಿ ಪೋಸ್ಟ್, ದಂಡಿನಶಿವರ ಹೋ: ತುರುವೇಕೆರೆ ತಾ: ಹಾಲಿವಾಸ; ಷೆರುಮನಹಳ್ಳಿ, ಬೆಳ್ಳಾವಿ ಹೋ: ತುಮಕೂರು ತಾಲ್ಲೂಕು. | – | 148/ಪಿ48 | 0.25 | – | ಪೂರ್ವ: ಮರಿಯಣ್ಣ<br>ಪಶ್ಚಿಮ: ಬೈರಯ್ಯ<br>ಉತ್ತರ: ಸಿದ್ದರಾಜು<br>ದಕ್ಷಿಣ: ಚನ್ನಪ್ಪಶೆಟ್ಟಿ |

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

ಪಿ.ಆರ್.927

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ಗುಲ್ಬರ್ಗಾ**

**ಸಂಖ್ಯೆ: ಅಗುನ್ನೆ/ಶ್ರೀಗಂಧ/ಹೀರೋಹೊಂಡಾ/71ಎ/ಸಿ.ಆರ್/08–09/2793, ದಿನಾಂಕ:30ನೇ ಜನವರಿ, 2010**

**ನಿರೂಪಣಾಧಿಕಾರಿ:** ಶ್ರೀ ಸಂತೋಷ ಕುಮಾರ,
ಭಾ.ಅ.ಸೇ.
ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪ್ರಾದೇಶಿಕ ಅರಣ್ಯ ವಿಭಾಗ, ಗುಲ್ಬರ್ಗಾ.

**ಫಿರ್ಯಾದುದಾರರು:** ವಲಯ ಅರಣ್ಯ ಅಧಿಕಾರಿ, ಪ್ರಾದೇಶಿಕ ವಲಯ, ಗುಲ್ಬರ್ಗಾ.

**ಅರ್ಜಿದಾರರು:**

**ಪ್ರಕರಣ ಹಿನ್ನಲೆ:**

ದಿನಾಂಕ:26.09.2008ರಂದು ಯಾದಗಿರ ವಲಯದ ಸಿಬ್ಬಂದಿಯವರು ಅರಣ್ಯ ರಕ್ಷಕರಾದ ಶ್ರೀ ಮಲ್ಲಣ್ಣ, ವೆಂಕಟಾಪೂರ ಅರಣ್ಯ ರಕ್ಷಕ ಶ್ರೀ ಮಹ್ಮದ್ ಮತೀನ್ ಇವರ ಜೊತೆಗೆ ಗಸ್ತು ಮಾಡುವಾಗ ಕೇಶ್ವಾರದಿಂದ ನಾರಾಯಣ ಪೇಟ ಗ್ರಾಮಕ್ಕೆ ಹೋಗುವ ರಸ್ತೆ ಮೇಲೆ ಅಕ್ರಮವಾಗಿ ಒಂದು ಶ್ರೀಗಂಧ ಮರ ಕಡೆದು ಶ್ರೀಗಂಧ ತುಂಡುಗಳನ್ನು ಹೀರೋ ಹೊಂಡಾ ಫ್ಯಾಶನ್ ಪ್ಲಸ್ ನಂ. ಎಪಿ–09–ಎಫ್‌ಟಿ–2923 ಬರುತ್ತಿರುವುದು ಕಂಡು ಅನುಮಾನಗೊಂಡು ಹೀರೋ ಹೊಂಡಾ ವಾಹನವನ್ನು ನಿಲ್ಲಿಸಿ ನೋಡಲಾಗಿ ಒಂದು ಚೀಲದಲ್ಲಿ ಶ್ರೀಗಂಧ ತುಂಡುಗಳು, ಗಿರಮಿಟ್, ಕೊಡಲಿ, ಗರಗಸ, ಇದ್ದು ಕಂಡು ಬಂದಿರುವುದರಿಂದ ಅಕ್ರಮವಾಗಿ ಶ್ರೀಗಂಧ ಮರವನ್ನು ಕಡೆದು ಕಳ್ಳಸಾಗಾಣಿಕೆ ಮಾಡುತ್ತಿರುವುದು ಖಚಿತ ಪಡಿಸಿಕೊಂಡು ಶ್ರೀ ಲಾಲಪ್ಪ ತಂದೆ ಬಂಡೆಪ್ಪ ಬೋಹಿನಿ ಸಾ: ಕೇಶ್ವಾರ ತಾಲ್ಲೂಕು ಯಾದಗಿರ ಹಾಗೂ ಇತರ ಮೂರು ಜನರ ಮೇಲೆ ಪ್ರಕರಣ ಸಂಖ್ಯೆ:17/08–09 ರಂತೆ ಅರಣ್ಯ ಪ್ರಕರಣ ದಾಖಲಿಸಿ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 83, 86, 87ರ ಪ್ರಕಾರ ದಾಖಲಿಸಿ ಸದರಿ ಸ್ವತ್ತುಗಳನ್ನು ಮತ್ತು ಒಂದು ಹೀರೋ ಹೊಂಡಾ ಪ್ಯಾಶನ್ ಪ್ಲಸ್ ದ್ವಿಚಕ್ರ ವಾಹನ ಜಪ್ತಿ ಮಾಡಿ ಪಂಚನಾಮೆ

ಮಾಡಿ ಈ ನ್ಯಾಯಾಲಯಕ್ಕೆ ಮುಂದಿನ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ. ಸದರಿ ಪ್ರಕರಣವನ್ನು ಅರಣ್ಯ ಕಾಯ್ದೆ 71–ಎ ಪ್ರಕಾರವಾಗಿ ಕ್ರಮ ಜರುಗಿಸಲು ವಶಪಡಿಸಿಕೊಂಡ ವಾಹನ ಹಾಗೂ ಅರಣ್ಯ ಉತ್ಪನ್ನಗಳನ್ನು ಈ ನ್ಯಾಯಾಲಯದಿಂದ ಮುಂದಿನ ಆದೇಶದವರೆಗೆ ವಲಯ ಅರಣ್ಯ ಅಧಿಕಾರಿ, ಯಾದಗಿರ ಇವರ ವಶಕ್ಕೆ ನೀಡಲಾಗಿರುತ್ತದೆ. ದಿನಾಂಕ:18.07.2009 ರಿಂದ 26.12.2009ರವರೆಗೆ ಹಲವಾರು ದಿನಾಂಕಗಳಂದು ಅರ್ಜಿದಾರರಿಗೆ (ಆರೋಪಿತರಿಗೆ) ಹಾಗೂ ದ್ವಿಚಕ್ರ ವಾಹನ ನೋಂದಾಯಿತ ಮಾಲೀಕರಿಗೆ ಸಮನ್ಸ್ ಜಾರಿ ಮಾಡಲಾಗಿ ಅವರಾಗಲಿ, ಅವರ ಪರ ವಕೀಲರಾಗಲಿ, ಯಾರೊಬ್ಬರು ಈ ಪ್ರಕರಣದಲ್ಲಿ ನ್ಯಾಯಾಲಯದ ಮುಂದೆ ಹಾಜರಾಗಿರುವುದಿಲ್ಲ ಹಾಗೂ ಸದರಿ ವಾಹನದ ದಾಖಲಾತಿಗಳನ್ನು ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿ, ಹೈದ್ರಾಬಾದ್‌ದಿಂದ ತರಿಸಿಕೊಳ್ಳಲಾಯಿತು.

ಮೇಲ್ಕಂಡ ಪ್ರಕರಣವನ್ನು ಅಂತಿಮವಾಗಿ ತೀರ್ಮಾನಗೊಳಿಸುವ ಸಲುವಾಗಿ ಪ್ರಕರಣದ ವಿಚಾರಣೆಯನ್ನು ದಿನಾಂಕ:18.07.2009 ರಿಂದ 26.12.2009 ರ ವರೆಗೆ ಹಲವಾರು ದಿನಾಂಕಗಳಂದು ಅಭಿಯೋಜನಾ ಸಾಕ್ಷಿಗಳನ್ನು ಹಾಗೂ ವಾಹನ ಮಾಲೀಕರ ಹೇಳಿಕೆಗಳನ್ನು Asst. Director of Public Prosecutor ಗುಲ್ಬರ್ಗಾ ರವರ ಹಾಗೂ ಅರ್ಜಿದಾರರ ಪರ ವಕೀಲರ ಸಮಕ್ಷಮ ನಡೆಸಲು ಯಾರೊಬ್ಬರು (ಆರೋಪಿತ ಪರ) ಹಾಜರಾಗದೇ ಇದ್ದುದರಿಂದ, ಸದರಿ ಪ್ರಕರಣದ ದ್ವಿಚಕ್ರ ವಾಹನದ ಬಗ್ಗೆ ಅವರಿಗೆ ಕಾಳಜಿ ಇಲ್ಲದು ಕಂಡು ಬಂದಿತು.

ಈ ಪ್ರಕರಣದಲ್ಲಿ ವಾಸ್ತವಾಂಶ ಮತ್ತು ಕಾನೂನು ವಸ್ತುಸ್ಥಿತಿ ಲಭ್ಯವಿದ್ದ ವಿಷಯ ಸಾಮಗ್ರಿಗಳ ಮೇಲೆ ಗಮನಿಸಿ ಪರಿಗಣಿಸಬೇಕಾದ ಅಂಶಗಳು ಈ ಕೆಳಗಿನಂತಿವೆ.

1) ಅರ್ಜಿದಾರರ ದ್ವಿಚಕ್ರ ವಾಹನವಾದ ನಂ.ಹೀರೋ ಹೊಂಡಾ ಫ್ಯಾಶನ್ ಪ್ಲಸ್ Chessic No.07 L.09 Co.2970 Engine No.07 LOSM 44016 Temp No. AP-09-FT-2923 ಸಣ್ಣ ಸಣ್ಣ ಶ್ರೀಗಂಧ ತುಂಡುಗಳು (7 ಕೆ.ಜಿ.) ದಿನಾಂಕ:26.09.2008 ರಂದು ಕಾನೂನು ವಿರುದ್ಧವಾಗಿ ಸಾಗಿಸಲು ಉಪಯೋಗಿಸಲಾಗಿತ್ತೇ? ಹಾಗೂ ರೀತಿ ಸಾಗಿಸುವ ಮುಖಾಂತರ ಅರಣ್ಯ ಅಪರಾಧವೆಸಗಿ ಕರ್ನಾಟಕ ಅರಣ್ಯ ಕಾಯ್ದೆ ಮತ್ತು ಉಲ್ಲಂಘನೆ ನಿಯಮ ಉಲ್ಲಂಘಿಸಲಾಗಿದೆಯೇ?

2) ಕರ್ನಾಟಕ ಅರಣ್ಯ ಕಾಯ್ದೆ 71(ಬಿ) (1)ರ ಪ್ರಕಾರ ವಾಹನದ ಮಾಲೀಕರಿಗೆ ಕಾರಣ ಕೇಳುವ ನೋಟೀಸ್ ನೀಡಲಾಗಿದೆಯೇ? ಹಾಗೂ ಮಾಲೀಕರಿಗೆ ಅವರ ಅಹವಾಲನ್ನು ಮಂಡಿಸಿ ಸಮರ್ಥಿಸಿಕೊಳ್ಳಲು ಸಾಕಷ್ಟು ಅವಕಾಶವನ್ನು ನೀಡಲಾಗಿದೆಯೇ?

3) ವಾಹನದ ಮಾಲೀಕರು ಅಥವಾ ಕೆಲಸಗಾರರು ಅವರ ಪ್ರತಿನಿಧಿಗಳು ವಾಹನದಲ್ಲಿ ಅಕ್ರಮವಾಗಿ ಸರ್ಕಾರದ ಸ್ವತ್ತಾದ ಅರಣ್ಯ ಉತ್ಪನ್ನವನ್ನು ಸಾಗಿಸಲು ಶಾಮೀಲಾಗಿದ್ದಾರೆಯೇ ಹಾಗೂ ವಾಹನ ಮಾಲೀಕರ ಅಥವಾ ಮಾಲೀಕರ ಪ್ರತಿನಿಧಿಗಳ ಗಮನಕ್ಕೆ ಬಾರದಂತೆಯೇ ವಾಹನವನ್ನು ಅರಣ್ಯ ಉತ್ಪನ್ನ ಕಳ್ಳ ಸಾಗಾಣಿಕೆಗೆ ಉಪಯೋಗಿಸಲಾಗಿದೆಯೇ? ಹಾಗೂ ಈ ವಾಹನವನ್ನು ಇಂತಹ ಅಕ್ರಮ ಕಾನೂನು ಬಾಹಿರ ಅರಣ್ಯ ಉತ್ಪನ್ನ ಸಾಗಾಣಿಕೆ ಉಪಯೋಗಿಸದಂತೆ ಮಾಲೀಕರು ಅಥವಾ ಚಾಲಕರು ಅಥವಾ ಅವರ ಪ್ರತಿನಿಧಿಗಳು ಸೂಕ್ತ ಮುನ್ನೆಚ್ಚರಿಕೆ ತೆಗೆದುಕೊಂಡಿರುತ್ತಾರೆಯೇ?

4) ಪ್ರಕರಣದಲ್ಲಿ ಫಿರ್ಯಾದುದಾರರು ಅಮಾನತ್ತುಪಡಿಸಿದ ಅರಣ್ಯ ಉತ್ಪನ್ನಗಳ ಮಾಲೀಕತ್ವ ಕರ್ನಾಟಕ ಅರಣ್ಯ ಕಾಯ್ದೆಯಂತೆ ಸರ್ಕಾರಿ ಸ್ವತ್ತೆಂದು ಅಭಿಯೋಗ ರುಜುವಾತು ಪಡಿಸಿದೆಯೇ?

5) ಪ್ರಕರಣದಲ್ಲಿ ಅಮಾನತ್ತುಪಡಿಸಿದ ವಾಹನ ಹಾಗೂ ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

6) ಏನು ತೀರ್ಮಾನಕ್ಕೆ ಬರಬಹುದಾಗಿದೆ.

ಈ ಮೇಲಿನ ಅಂಶಗಳಿಗೆ ಈ ಕೆಳಗಿನಂತೆ ಉತ್ತರಿಸಿ ಈ ಕೆಳಗಿನಂತೆ ತೀರ್ಮಾನಕ್ಕೆ ಬರಲಾಗಿದೆ. ಅದಕ್ಕೆ ಕಾರಣಗಳನ್ನು ಈ ಕೆಳಗಿನಂತೆ ನೀಡಲಾಗಿದೆ.

1) ಒಂದನೇ ಅಂಶಕ್ಕೆ ಹೌದು ಎಂತಲೂ

2) ಎರಡನೇ ಅಂಶಕ್ಕೆ ಹೌದು ಎಂತಲೂ

3) ಮೂರನೇ ಅಂಶಕ್ಕೆ ಮೊದಲನೇ ಭಾಗದ ಪ್ರಶ್ನೆಗೆ ಹೌದು ಎಂದು ಎರಡು ಮೂರನೇ ಭಾಗದ ಪ್ರಶ್ನೆಗೆ ಇಲ್ಲ ಎಂದಾಗಿರುತ್ತದೆ.

4) ನಾಲ್ಕನೇ ಅಂಶಕ್ಕೆ ಹೌದು ಎಂತಲೂ

5) ಐದನೇ ಅಂಶಕ್ಕೆ ಹೌದು ಎಂತಲೂ ಈ ಕೆಳಗಿನಂತೆ ಕಾರಣಗಳಿಂದ ತೀರ್ಮಾನಕ್ಕೆ ಬರಲಾಗಿದೆ.

**ಅಂಶ–1:**

ದಿನಾಂಕ:26.09.2008 ರಂದು ಯಾದಗಿರ ವಲಯದ ಸಿಬ್ಬಂದಿಯವರು ಗುರುಮಿಟಕಲ್ ಶಾಖೆಯ ವೆಂಕಟಾಪೂರ ಬೀಟ್‌ನಲ್ಲಿ ಗಸ್ತು ಮಾಡುವಾಗ ಸುಮಾರು 12.00 ಗಂಟೆಗೆ ಕೇಶ್ವಾರದಿಂದ ನಾರಾಯಣಪೂರ ರಸ್ತೆಯಲ್ಲಿ ಹೋಗುವಾಗ ಅನುಮಾನಾಸ್ಪದವಾಗಿ ಹೋಗುತ್ತಿರುವುದನ್ನು ಕಂಡು ದ್ವಿಚಕ್ರ ವಾಹನ ನಿಲ್ಲಿಸಿ ಪರಿಶೀಲಿಸಲಾಗಿ ಶ್ರೀ ಬಂಡೆಪ್ಪ ಬೋವಿನ್ ಸಾ: ಕೇಶ್ವಾರ ಗ್ರಾಮ ತಾ: ಯಾದಗಿರಿ ಇವರು ನಡೆಸುತ್ತಿರುವ ದ್ವಿಚಕ್ರ ವಾಹನವನ್ನು ತಡೆದು ನಿಲ್ಲಿಸಿ ಪರಿಶೀಲಿಸಲಾಗಿ ಹೀರೋ ಹೊಂಡಾ ಫ್ಯಾಶನ್ ಪ್ಲಸ್ ಆಗಿದ್ದು, ಅದರ ನೊಂದಾಯಿತ ಸಂಖ್ಯೆ: ಎಪಿ–09–ಎಫ್‌ಟಿ–2923 ಹಿಂದುಗಡೆ ಕುಳಿತವರ ಕೈಯಲ್ಲಿರುವ ಚೀಲವನ್ನು ಪರಿಶೀಲಿಸಿ ಅದರಲ್ಲಿ ಶ್ರೀಗಂಧ ತುಂಡುಗಳು ಇದ್ದದು ಕಂಡುಬಂತು. ಸದರಿ ಸ್ವತ್ತು ವಶಪಡಿಸಿಕೊಂಡು ವಾಹನ ಮಾಲೀಕರಾಗಲಿ ಇಲ್ಲದೆ ವಾಹನ ಉಸ್ತುವಾರಿದಾರರಾಗಲೀ ವಾಹನದ ಅಕ್ರಮ ಅರಣ್ಯ ಉತ್ಪನ್ನ ಸಾಗಾಣಿಕೆಯಲ್ಲಿ ಭಾಗಿ ಆಗದಂತೆ ಮುಂಜಾಗ್ರತೆ ಕ್ರಮ ತೆಗೆದುಕೊಳ್ಳದೆ, ಬದಲಾಗಿ ತಮಗೆ ಗೊತ್ತಿದ್ದೆ, ಈ ವ್ಯಕ್ತಿಯ ಈ ವಾಹನದಲ್ಲಿ ಅಕ್ರಮವಾಗಿ ಸಾಗುವಾನಿ ತುಂಡುಗಳನ್ನು ಅರಣ್ಯ ಕಾಯ್ದೆ ಮತ್ತು ಕಾನೂನಿನ ವಿರುದ್ಧವಾಗಿ ಸಾಗಿಸಲು ಉಪಯೋಗಿಸಿದೆ ಎಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ನೀಡಬಯಸುತ್ತೇನೆ.

**ಆದೇಶ**

ಈ ಮೇಲ್ಕಾಣಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ, ಎಲ್ಲಾ ಅಗತ್ಯ ದಾಖಲಾತಿಗಳನ್ನು ಹಾಗೂ ಸಾಕ್ಷಾಧಾರಗಳನ್ನು ಮತ್ತು ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀ ಸಂತೋಷ ಕುಮಾರ, ಭಾ.ಅ.ಸೇ. ಅಧಿಕಾರಿಯುತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಗುಲ್ಬರ್ಗಾ ವಿಭಾಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಎ) (2ನೇ ತಿದ್ದುಪಡಿ) ಪ್ರಕಾರ ನೊಂದಣಿ ಸಂಖ್ಯೆಯ ಹೀರೋ ಹೊಂಡಾ ಪ್ಯಾಶನ್ ಪ್ಲಸ್ Temp No.AP-09-FT-2923 (Chessis No.07 L.09 Co.2970, Engine No.07 LOSM 44016). 7 ಕೆ.ಜಿ. ಶ್ರೀಗಂಧ ತುಂಡುಗಳು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಿದ್ದರೆ ಈ ಆದೇಶ ಹೊರಡಿಸಿದ 30 ದಿವಸಗಳೊಳಗಾಗಿ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೇ ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನ ಹಾಗೂ ಉತ್ಪನ್ನವನ್ನು ಕಾನೂನು ರೀತ್ಯಾ ವಿಲೇವಾರಿ ಮಾಡಲು ಕೂಡ ಆದೇಶಿಸಿದೆ.

ಈ ಆದೇಶವನ್ನು ಈ ದಿನಾಂಕ:30.01.2010ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತೇನೆ.

**ಸಂತೋಷ ಕುಮಾರ,** ಭಾ.ಅ.ಸೇ.
ಅಧಿಕಾರಿಯುತ ಅಧಿಕಾರಿಗಳು ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ,
ಪ್ರಾದೇಶಿಕ ಅರಣ್ಯ ವಿಭಾಗ, ಗುಲ್ಬರ್ಗಾ.

ಪಿ.ಆರ್.933

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್**

**ವಿಷಯ:** ಸಮಾಪನೆಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಇಸ್ಲಾಂಪೂರ ತಾಲ್ಲೂಕು ಬಸವಕಲ್ಯಾಣ ಇದರ ನೊಂದಣಿ ಸಂಖ್ಯೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75ರನ್ವಯ ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಉನಿಬಿ/ವಿ3/ಸಮಾಪನೆ/2009–10/ದಿನಾಂಕ:31.12.2009.

2) ಸಮಾಪನೆ ಅಧಿಕಾರಿಗಳ ಪ್ರಸ್ತಾವನೆ ದಿನಾಂಕ:30.03.2010.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಉಪ ವಿಭಾಗ, ಬೀದರ್ ಇವರ ಪತ್ರ ಸಂಖ್ಯೆ:ಸನಿಬಿ1/ವಿ7/ಸಮಾಪನೆ/2009–2010, ದಿನಾಂಕ:30.03.2010.

**ಪ್ರಸ್ತಾವನೆ:**

ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಇಸ್ಲಾಂಪೂರ ತಾಲ್ಲೂಕು ಬಸವಕಲ್ಯಾಣ ಇದರ ಕಾರ್ಯ ಚಟುವಟಿಕೆಗಳು ಸಂಪೂರ್ಣವಾಗಿ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (1)ರ ಆದೇಶದನ್ವಯ ಸಮಾಪನೆಗೊಳಿಸಿ ಹಾಲು ವಿಸ್ತೀರ್ಣಾಧಿಕಾರಿ, ಕೆ.ಎಂ.ಎಫ್. ಹುಡಗಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಅದರಂತೆ

ಸಮಾಪನಾಧಿಕಾರಿಗಳು ಪುನಃಶ್ಚೇತನಗೊಳಿಸಲು ಯಾವ ಸದಸ್ಯರಲ್ಲಿ ಆಸಕ್ತಿಯಿರುವುದಿಲ್ಲವೆಂದು ತೀರ್ಮಾನಿಸಿರುತ್ತಾರೆ. ಸಂಘದಲ್ಲಿ ಸದಸ್ಯರ ಪುಸ್ತಕ, ಷೇರು ಪುಸ್ತಕ, ನಗದು ಪುಸ್ತಕ ಮತ್ತು ಇತರ ಅವಶ್ಯಕ ಪುಸ್ತಕಗಳು ಲಭ್ಯವಿಲ್ಲ. ದಿನಾಂಕ:31.03.2008ರ ಅಂತ್ಯಕ್ಕೆ ಲಭ್ಯವಿದ್ದ ಅಡಾವೆ ಪತ್ರಿಕೆಯ ಪ್ರಕಾರ ಸಂಘದ ಉಳಿತಾಯ ಖಾತೆಯಲ್ಲಿ ರೂ.23089/– ಮತ್ತು ಮುದ್ದತ್ತು ಠೇವಣಿ ರೂ.15000/– ಇರುತ್ತವೆಯೆಂದು ಸಮಾಪನೆ ಅಧಿಕಾರಿಗಳು ತಿಳಿಸಿರುತ್ತಾರೆ. ಹೊಣೆಗಾರಿಕೆಯ ಕುರಿತು ಯಾವ ದಾಖಲಾತಿ ಇರಲಾರದರ ಕಾರಣ ಇತ್ಯಾರ್ಥಗೊಳಿಸಲು ಸಾಧ್ಯವಿಲ್ಲವೆಂದು ಹೊರತು ಯಾವುದೇ ಆಸ್ತಿ ವಸೂಲಿ ಮಾಡುವುದು ಸಂಭವವಿಲ್ಲವೆಂದು ತಿಳಿಸುತ್ತಾ ಲಭ್ಯವಿದ್ದ ದಾಖಲಾತಿಗಳ ಪ್ರಕಾರ ಸಂಘದಲ್ಲಿ ಯಾವುದೇ ಆಸ್ತಿ ಜವಾಬ್ದಾರಿ ಇರುವುದಿಲ್ಲ. ಇದರ ಪ್ರಯುಕ್ತ ಇದರ ನೋಂದಣಿಯನ್ನು ರದ್ದುಪಡಿಸಲು ಉಲ್ಲೇಖ (2)ರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ರವರು ಸಹ ಸದರಿ ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಏನು ಇರುವುದಿಲ್ಲವೆಂದು ಸಂಘದ ಉಳಿದ ಯಾವ ಆಸ್ತಿ ವಸೂಲಿ ಮಾಡಲು ದಾಖಲಾತಿಗಳು ಲಭ್ಯವಿಲ್ಲವೆಂದು ತಿಳಿಸುತ್ತಾ ಆಸ್ತಿ ಜವಾಬ್ದಾರಿಯನ್ನು ಇತ್ಯಾರ್ಥಗೊಳಿಸಲು ಸಾಧ್ಯವಿಲ್ಲವೆಂದು ಪರಿಗಣಿಸಿ ಇದರ ನೊಂದಣಿ ಸಂಖ್ಯೆ: ಸನಿಬಿ1/ವಿ4/ಆರ್.ಎಸ್.ಆರ್/11292/1985–86/ ದಿನಾಂಕ:17.11.1985 ರದ್ದುಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಆದುದರಿಂದ ಕೆಳಕಂಡ ಆದೇಶ.

**ಆದೇಶ**

**ಸಂಖ್ಯೆ: ಉನಿಬಿ/ವಿ1/ಸಮಾಪನೆ/ಸಿಆರ್/2009–2010/1679, ದಿನಾಂಕ:31ನೇ ಮಾರ್ಚ್, 2010**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21.11.2001ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಚವ್ಹಾಣ ಗೋಪಾಲ ಸಹಕಾರ ಸಂಘಗಳ ಉಪನಿಬಂಧಕರು, ಬೀದರ ಜಿಲ್ಲೆ, ಬೀದರ ಆದ ನಾನು ಸಮಾಪನೆಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಇಸ್ಲಾಂಪೂರ ತಾ: ಬಸವಕಲ್ಯಾಣ ಇದರ ನೋಂದಣಿ ಸಂಖ್ಯೆ: ಸನಿಬಿ1/ವಿ4/ಆರ್.ಎಸ್.ಆರ್/11292/1985–86/ ದಿನಾಂಕ:17.11.1985 ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸತಕ್ಕದ್ದು. ಹಾಗೂ ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಕರ್ನಾಟಕ ಸಹಕಾರ ಸಂಘಗಳ ನಿಯಮಗಳ 1960ರ ನಿಯಮ 33(ಎನ್) ರನ್ವಯ ಈ ಸಂಘದ ಎಲ್ಲಾ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ:31.03.2010 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಬೀದರ್ ಜಿಲ್ಲೆ, ಬೀದರ್.

ಪಿ.ಆರ್.972

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್**

**ವಿಷಯ:** ಸಮಾಪನೆಗೊಂಡ ಗುರುನಾನಕ ದೇವ ಪಾಲಿಟೆಕ್ನಿಕ್ ಕಾಲೇಜು ಪತ್ತಿನ ಸಹಕಾರ ಸಂಘ ನಿಯಮಿತ, ಬೀದರ್ ತಾಲ್ಲೂಕು, ಬೀದರ್ ಇದರ ನೊಂದಣಿ ಸಂಖ್ಯೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75ರನ್ವಯ ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಉನಿಬಿ/ವಿ3/ಸಮಾಪನೆ/2009–10/ದಿನಾಂಕ:31.12.2009.

2) ಸಮಾಪನೆ ಅಧಿಕಾರಿಗಳ ಪ್ರಸ್ತಾವನೆ ದಿನಾಂಕ:30.03.2010.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಉಪ ವಿಭಾಗ, ಬೀದರ್ ಇವರ ಪತ್ರ ಸಂಖ್ಯೆ:ಸನಿಬಿ1/ವಿ7/ಸಮಾಪನೆ/2009–2010, ದಿನಾಂಕ:30.03.2010.

**ಪ್ರಸ್ತಾವನೆ:**

ಗುರುನಾನಕ ದೇವ ಪಾಲಿಟೆಕ್ನಿಕ್ ಕಾಲೇಜು ಪತ್ತಿನ ಸಹಕಾರ ಸಂಘ ನಿಯಮಿತ, ಬೀದರ್ ತಾಲ್ಲೂಕು, ಬೀದರ್ ಇದರ ಕಾರ್ಯ ಚಟುವಟಿಕೆಗಳು ಸಂಪೂರ್ಣವಾಗಿ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (1)ರ ಆದೇಶದಲ್ಲಿ

ಸಮಾಪನೆಗೊಳಿಸಿ ಸಹಕಾರ ನಿರೀಕ್ಷಕರು, ಬೀದರ್ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಅದರಂತೆ ಸಮಾಪನಾಧಿಕಾರಿಗಳು ಪುನಃಶ್ಚೇತನಗೊಳಿಸಲು ಯಾವ ಸದಸ್ಯರಲ್ಲಿ ಆಸಕ್ತಿಯಿರುವುದಿಲ್ಲವೆಂದು ತೀರ್ಮಾನಿಸಿರುತ್ತಾರೆ. ಸಂಘದ ಲೆಕ್ಕ ಪುಸ್ತಕಗಳು, ಕಾಗದ ಪತ್ರಗಳು ಲಭ್ಯವಿಲ್ಲ. ಸಂಘದ ಉಳಿತಾಯ ಖಾತೆಯಲ್ಲಿ ರೂ.36205/– ಇರುತ್ತದೆ. ಇದರ ಹೊರತು ಸಂಘದಲ್ಲಿ ಯಾವುದೇ ಆಸ್ತಿ ಜವಾಬ್ದಾರಿ ಇರಲಾರದ ಪ್ರಯುಕ್ತ ಇದರ ನೊಂದಣಿಯನ್ನು ರದ್ದುಪಡಿಸಲು ಉಲ್ಲೇಖ (2)ರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ರವರು ಸಹ ಸದರಿ ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಏನು ಇರುವುದಿಲ್ಲವೆಂದು ಮತ್ತು ಸಂಘದ ಆಸ್ತಿ– ಜವಾಬ್ದಾರಿಯಲ್ಲಿನ ಬಾಕಿ ಹಣವನ್ನು ವಸೂಲಿ ಮಾಡಲು ಮತ್ತು ಆಸ್ತಿ ಜವಾಬ್ದಾರಿಯನ್ನು ಇತ್ಯಾರ್ಥಗೊಳಿಸಲು ಸಾಧ್ಯವಿಲ್ಲವೆಂದು ಪರಿಗಣಿಸಿ ಇದರ ನೊಂದಣಿ ಸಂಖ್ಯೆ:ಸನಿಬಿ1/ವಿ4/ಯುಬಿಸಿ/27040/1999–2000/ ದಿನಾಂಕ:31.03.2000 ರದ್ದುಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಹಾಗೂ ಉಳಿತಾಯ ಖಾತೆಯಲ್ಲಿದ್ದ ಹಣ ರೂ.36205/– ಡಿಸಿಸಿ ಬ್ಯಾಂಕಿನಲ್ಲಿರುವ ಪಿ.ಡಿ. ಖಾತೆಯಲ್ಲಿ ಜಮಾ ಮಾಡಲು ಸಮಾಪನಾಧಿಕಾರಿ ಇವರು ಶಿಫಾರಸ್ಸು ಮಾಡಿರುತ್ತಾರೆ. ಇದಕ್ಕೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಇವರು ದೃಢೀಕರಿಸಿರುತ್ತಾರೆ. ಆದುದರಿಂದ ಕೆಳಕಂಡ ಆದೇಶ.

**ಆದೇಶ**

**ಸಂಖ್ಯೆ: ಉನಿಬಿ/ವಿ1/ಸಮಾಪನೆ/ಸಿಆರ್/2009–2010/1682, ದಿನಾಂಕ:31ನೇ ಮಾರ್ಚ್, 2010**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21.11.2001ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಚವ್ಹಾಣ ಗೋಪಾಲ ಸಹಕಾರ ಸಂಘಗಳ ಉಪನಿಬಂಧಕರು, ಬೀದರ್ ಜಿಲ್ಲೆ, ಬೀದರ ಆದ ನಾನು ಸಮಾಪನೆಗೊಂಡ ಗುರುನಾನಕ ದೇವ ಪಾಲಿಟೆಕ್ನಿಕ್ ಕಾಲೇಜು ಪತ್ತಿನ ಸಹಕಾರ ಸಂಘ ನಿಯಮಿತ, ಬೀದರ್ ತಾಲ್ಲೂಕು, ಬೀದರ್ ಇದರ ನೋಂದಣಿ ಸಂಖ್ಯೆ: ಸನಿಬಿ1/ವಿ4/ಯುಬಿಸಿ/27040/1999–2000 ದಿನಾಂಕ:31.03.2000 ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಮತ್ತು ರೂ.36205/– (ರೂ. ಮೂವತ್ತಾರು ಸಾವಿರದ ಎರಡು ನೂರು ಐದು ಮಾತ್ರ) ಡಿಸಿಸಿ ಬ್ಯಾಂಕ್‌ನಲ್ಲಿರುವ ಮೊತ್ತವನ್ನೊಳಗೊಂಡ ಸಹಕಾರ ಸಂಘಗಳ ಪಿ.ಡಿ. ಖಾತೆ ಸಂಖ್ಯೆ/197/ ಇದರಲ್ಲಿ ಜಮಾ ಮಾಡಲು ಆದೇಶಿಸಲಾಗಿದೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸತಕ್ಕದ್ದು. ಹಾಗೂ ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಕರ್ನಾಟಕ ಸಹಕಾರ ಸಂಘಗಳ ನಿಯಮಗಳ 1960ರ ನಿಯಮ 33(ಎನ್) ರನ್ವಯ ಈ ಸಂಘದ ಎಲ್ಲಾ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ:31.03.2010 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಬೀದರ್ ಜಿಲ್ಲೆ, ಬೀದರ್.

ಪಿ.ಆರ್.973

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್**

**ವಿಷಯ:** ಸಮಾಪನೆಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಶರಣನಗರ ತಾಲ್ಲೂಕು ಬಸವಕಲ್ಯಾಣ ಇದರ ನೊಂದಣಿ ಸಂಖ್ಯೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75ರನ್ವಯ ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಉನಿಬಿ/ವಿ3/ಸಮಾಪನೆ/2009–10/ದಿನಾಂಕ:30.11.2009.

2) ಸಮಾಪನೆ ಅಧಿಕಾರಿಗಳ ಪ್ರಸ್ತಾವನೆ ದಿನಾಂಕ:30.03.2010.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಉಪ ವಿಭಾಗ, ಬೀದರ್ ಇವರ ಪತ್ರ ಸಂಖ್ಯೆ:ಸನಿಬಿ1/ವಿ7/ಸಮಾಪನೆ/2009–2010, ದಿನಾಂಕ:30.03.2010.

**ಪ್ರಸ್ತಾವನೆ:**

ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ಶರಣನಗರ ತಾಲ್ಲೂಕು ಬಸವಕಲ್ಯಾಣ ಇದರ ಕಾರ್ಯ ಚಟುವಟಿಕೆಗಳು ಸಂಪೂರ್ಣವಾಗಿ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (1)ರ ಆದೇಶದನ್ವಯ ಸಮಾಪನೆಗೊಳಿಸಿ ಹಾಲು ವಿಸ್ತೀರ್ಣಾಧಿಕಾರಿ, ಕೆ.ಎಂ.ಎಫ್. ಹುಡಗಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಅದರಂತೆ ಸಮಾಪನಾಧಿಕಾರಿಗಳು ಪುನಃಶ್ಚೇತನಗೊಳಿಸಲು ಯಾವ ಸದಸ್ಯರಲ್ಲಿ ಆಸಕ್ತಿಯಿರುವುದಿಲ್ಲವೆಂದು ತೀರ್ಮಾನಿಸಿರುತ್ತಾರೆ. ಲಭ್ಯವಿದ್ದ ದಾಖಲಾತಿಗಳ ಪ್ರಕಾರ ಸಂಘದಲ್ಲಿ ಯಾವುದೇ ಆಸ್ತಿ ಜವಾಬ್ದಾರಿ ಇರುವುದಿಲ್ಲವೆಂದು ತಿಳಿಸಿರುತ್ತಾರೆ. ಹಾಗೂ ಇದರ ನೊಂದಣಿಯನ್ನು ರದ್ದುಪಡಿಸಲು ಉಲ್ಲೇಖ (2)ರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ರವರು ಸಹ ಸದರಿ ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಏನು ಇರುವುದಿಲ್ಲವೆಂದು ಮತ್ತು ಸಂಘದಲ್ಲಿರುವ ಆಸ್ತಿ ಜವಾಬ್ದಾರಿ ವಸೂಲಿ ಮಾಡಲು ಇತ್ಯಾರ್ಥಗೊಳಿಸಲು ಸಾಧ್ಯವಿಲ್ಲವೆಂದು ಪರಿಗಣಿಸಿ ಇದರ ನೊಂದಣಿ ಸಂಖ್ಯೆ: ಸನಿಬಿ1/ವಿ4/ಆರ್.ಎಸ್.ಆರ್./783/1978-79, ದಿನಾಂಕ:24.09.1978 ರದ್ದುಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಆದುದರಿಂದ ಕೆಳಕಂಡ ಆದೇಶ.

**ಆದೇಶ**

**ಸಂಖ್ಯೆ: ಉನಿಬಿ/ವಿ1/ಸಮಾಪನೆ/ಸಿಆರ್/2009-2010/1673, ದಿನಾಂಕ:31ನೇ ಮಾರ್ಚ್, 2010**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21.11.2001ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಚವ್ಹಾಣ ಗೋಪಾಲ ಸಹಕಾರ ಸಂಘಗಳ ಉಪನಿಬಂಧಕರು, ಬೀದರ್ ಜಿಲ್ಲೆ, ಬೀದರ ಆದ ನಾನು ಸಮಾಪನೆಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ಶರಣನಗರ ತಾ: ಬಸವಕಲ್ಯಾಣ ಇದರ ನೋಂದಣಿ ಸಂಖ್ಯೆ: ಸನಿಬಿ1/ವಿ4/ಆರ್.ಎಸ್.ಆರ್/783/1978-79/ದಿನಾಂಕ:24.09.1978 ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸತಕ್ಕದ್ದು. ಮತ್ತು ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಕರ್ನಾಟಕ ಸಹಕಾರ ಸಂಘಗಳ ನಿಯಮಗಳ 1960ರ ನಿಯಮ 33(ಎನ್) ರನ್ವಯ ಈ ಸಂಘದ ಎಲ್ಲಾ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ:31.03.2010 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,
ಪಿ.ಆರ್.974 ಬೀದರ್ ಜಿಲ್ಲೆ, ಬೀದರ್.

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೀದರ್ ಜಿಲ್ಲೆ, ಬೀದರ್**

**ವಿಷಯ:** ಸಮಾಪನೆಗೊಂಡ ವಿವಿಧೊದ್ದೇಶ ಸಹಕಾರ ಸಂಘ ನಿಯಮಿತ ಭಾಲ್ಕಿ ತಾಲ್ಲೂಕು, ಭಾಲ್ಕಿ ಇದರ ನೊಂದಣಿ ಸಂಖ್ಯೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 75ರನ್ವಯ ರದ್ದುಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಉನಿಬಿ/ವಿ3/ಸಮಾಪನೆ/2009-10/ದಿನಾಂಕ:30.03.2010.

2) ಸಮಾಪನೆ ಅಧಿಕಾರಿಗಳ ಪ್ರಸ್ತಾವನೆ ದಿನಾಂಕ:28.03.2010.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಉಪ ವಿಭಾಗ, ಬೀದರ್ ಇವರ ಪತ್ರ ಸಂಖ್ಯೆ:ಸನಿಬಿ1/ವಿ7/ಸಮಾಪನೆ/2009-2010, ದಿನಾಂಕ:30.03.2010.

**ಪ್ರಸ್ತಾವನೆ:**

ವಿವಿಧೊದ್ದೇಶ ಸಹಕಾರ ಸಂಘ ನಿಯಮಿತ ಭಾಲ್ಕಿ ತಾಲ್ಲೂಕು, ಭಾಲ್ಕಿ ಇದರ ಕಾರ್ಯ ಚಟುವಟಿಕೆಗಳು ಸಂಪೂರ್ಣವಾಗಿ ಸ್ಥಗಿತಗೊಂಡಿರುವುದರಿಂದ ಉಲ್ಲೇಖ (1)ರ ಆದೇಶದನ್ವಯ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಭಾಲ್ಕಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಅದರಂತೆ ಸಮಾಪನಾಧಿಕಾರಿಗಳು ಪುನಃಶ್ಚೇತನಗೊಳಿಸಲು ಯಾವ ಸದಸ್ಯರಲ್ಲಿ ಆಸಕ್ತಿಯಿರುವುದಿಲ್ಲವೆಂದು ತೀರ್ಮಾನಿಸಿರುತ್ತಾರೆ. ಸಂಘದ ಬ್ಯಾಂಕ್ ಖಾತೆ

ಮುಕ್ತಾಯಗೊಂಡಿದ್ದು, ಸಂಘದ ಯಾವ ಲೆಕ್ಕ ಪತ್ರಗಳು, ಲೆಕ್ಕ ತಃಖ್ತೆಗಳು ಲಭ್ಯವಿಲ್ಲವೆಂದು ತಿಳಿಸುತ್ತಾ ನೊಂದಣಿಯಾದ ನಂತರ ಸಂಘವು ಕಾರ್ಯವನ್ನು ಪ್ರಾರಂಭಿಸಿರುವುದಿಲ್ಲವೆಂದು ವರದಿ ಮಾಡಿರುತ್ತಾರೆ. ಈ ಹೊರತು ಲಭ್ಯವಿದ್ದ ದಾಖಲಾತಿಗಳ ಪ್ರಕಾರ ಸಂಘದಲ್ಲಿ ಯಾವುದೇ ಆಸ್ತಿ ಜವಾಬ್ದಾರಿ ಇರಲಾರದ ಪ್ರಯುಕ್ತ ಇದರ ನೊಂದಣಿಯನ್ನು ರದ್ದುಪಡಿಸಲು ಉಲ್ಲೇಖ (2)ರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ರವರು ಸಹ ಸದರಿ ಸಂಘದಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಏನು ಇರುವುದಿಲ್ಲವೆಂದು ಮತ್ತು ಸಂಘದಲ್ಲಿ ಯಾವ ಆಸ್ತಿ ವಸೂಲಿ ಮಾಡಲು ಸಾಧ್ಯವಿಲ್ಲವೆಂದು ಕೋರುತ್ತಾ ಆಸ್ತಿ ಜವಾಬ್ದಾರಿಯನ್ನು ಇತ್ಯಾರ್ಥಗೊಳಿಸಲು ಸಾಧ್ಯವಿಲ್ಲವೆಂದು ಪರಿಗಣಿಸಿ ಇದರ ನೊಂದಣಿ ಸಂಖ್ಯೆ:ಸನಿಬಿ1/ವಿ4/ನೊಂದಣಿ/33704/2003–04/ ದಿನಾಂಕ:31.03.2004 ರದ್ದುಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಆದುದರಿಂದ ಕೆಳಕಂಡ ಆದೇಶ.

**ಆದೇಶ**

**ಸಂಖ್ಯೆ: ಉನಿಬಿ/ವಿ1/ಸಮಾಪನೆ/ಸಿಆರ್/2009–2010/1686, ದಿನಾಂಕ:31ನೇ ಮಾರ್ಚ್, 2010**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿನಾಂಕ:21.11.2001ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಚವ್ಹಾಣ ಗೋಪಾಲ ಸಹಕಾರ ಸಂಘಗಳ ಉಪನಿಬಂಧಕರು, ಬೀದರ್ ಜಿಲ್ಲೆ, ಬೀದರ ಆದ ನಾನು ಸಮಾಪನೆಗೊಂಡ ವಿವಿಧೋದ್ದೇಶ ಸಹಕಾರ ಸಂಘ ನಿಯಮಿತ ಭಾಲ್ಕಿ ತಾಲ್ಲೂಕು, ಭಾಲ್ಕಿ ಇದರ ನೋಂದಣಿ ಸಂಖ್ಯೆ: ಸನಿಬಿ1/ವಿ4/ನೋಂದಣಿ/33704/2003–04, ದಿನಾಂಕ:31.03.2004ನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸತಕ್ಕದ್ದು. ಮತ್ತು ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು. ಕರ್ನಾಟಕ ಸಹಕಾರ ಸಂಘಗಳ ನಿಯಮಗಳ 1960ರ ನಿಯಮ 33(ಎನ್) ರನ್ವಯ ಈ ಸಂಘದ ಎಲ್ಲಾ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೀದರ್ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಈ ಕಛೇರಿ ಮುದ್ರೆಯೊಂದಿಗೆ ದಿನಾಂಕ:31.03.2010 ರಂದು ಈ ಆದೇಶವನ್ನು ಹೊರಡಿಸಲಾಗಿದೆ.

ಸಹಕಾರ ಸಂಘಗಳ ಉಪನಿಬಂಧಕರು,

ಪಿ.ಆರ್.975 ಬೀದರ್ ಜಿಲ್ಲೆ, ಬೀದರ್.

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಕೃಮಾಇ:18:ಚುನಾವಣೆ:2008, ಬೆಂಗಳೂರು, ದಿನಾಂಕ:5ನೇ ಜೂನ್, 2010**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 102 ಹಾಗೂ ನಿಯಮಾವಳಿಗಳು, 1968ರ ನಿಯಮ 88ಐ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾದ ಜಿ. ರಾಮಚಂದ್ರ ಆದ ನಾನು, ಕೊಡಗು ಜಿಲ್ಲೆಯಿಂದ ಕರ್ನಾಟಕ ರಾಜ್ಯ ಕೃಷಿ ಮಾರಾಟ ಮಂಡಳಿಗೆ ಆಯ್ಕೆಯಾದ ಸದಸ್ಯರ ಹೆಸರನ್ನು ಈ ಕೆಳಕಂಡಂತೆ ಪ್ರಕಟಿಸಿರುತ್ತೇನೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಆಯ್ಕೆಯಾದ ಸದಸ್ಯರ ಹೆಸರು |
|---|---|---|
| 1. | ಕೊಡಗು | ಶ್ರೀ ಪಿ.ಕೆ. ಶೇಷಪ್ಪ<br>ಅಧ್ಯಕ್ಷರು, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಕುಶಾಲನಗರ. |

**ಜಿ. ರಾಮಚಂದ್ರ**

ಪಿ.ಆರ್.980 ನಿರ್ದೇಶಕರು.

**ಕಂದಾಯ ಇಲಾಖೆ**

**ತಿದ್ದುಪಡಿ ಆದೇಶ**

**ಸಂಖ್ಯೆ: ಕಂಇ 94 ಎಲ್‌ಆರ್‌ಎ 2010, ಬೆಂಗಳೂರು, ದಿನಾಂಕ:4ನೇ ಜೂನ್, 2010**

ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 48 ಎಲ್‌ಆರ್‌ಎ 2008 ದಿನಾಂಕ:01.10.2008ರ ಪಟ್ಟಿಯ ಕ್ರ.ಸಂ.5ರಲ್ಲಿ "ಶ್ರೀಮತಿ ಸೀತಾಶಿವಾಜಿ ಚವ್ಹಾಣ" ಇವರ ಬದಲಾಗಿ "ಶ್ರೀಮತಿ ವಿದ್ಯಾ ಆನಂದ ಪಾಟೀಲ" ನಂ.140 ನಿಂಗಾಪೂರಗಲ್ಲಿ, ಖಾನಾಪುರ ತಾಲ್ಲೂಕು ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎನ್. ನಾರಾಯಣ ಗೌಡ**

ಪಿ.ಆರ್.987

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

**ಪೊಲೀಸ್ ಇಲಾಖೆ**

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ: 09/ಅಸೂ/ಡಿಸಿಪಿ/ಸಂಪೂ/2010, ಬೆಂಗಳೂರು, ದಿನಾಂಕ:15ನೇ ಜೂನ್, 2010**

ಬೆಂಗಳೂರು ನಗರ– ಕಬ್ಬನ್‌ಪಾರ್ಕ್ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯ ವಾಲ್ಟನ್ ರಸ್ತೆಯು ಕಾಫಿಡೇ ವೃತ್ತದ ಕಡೆಯಿಂದ ದಕ್ಷಿಣ–ಉತ್ತರಾಭಿಮುಖವಾಗಿ ಹಾದು ನಂತರ ಬಲಕ್ಕೆ ತಿರುವು ಪಡೆದು ಪಶ್ಚಿಮ–ಪೂರ್ವಾಭಿಮುಖವಾಗಿ ಹಾದು ಹೋಗುತ್ತದೆ. ಈ ರಸ್ತೆಯಲ್ಲಿ ವಾಣಿಜ್ಯ ಸಂಕೀರ್ಣ, ಹೋಟೆಲ್, ವಾಸದ ಮನೆಗಳು ಮತ್ತು ಅಪಾರ್ಟ್‌ಮೆಂಟ್‌ಗಳಿದ್ದು, ರಸ್ತೆಯಲ್ಲಿ ವಾಹನಗಳನ್ನು ಅಡ್ಡಾದಿಡ್ಡಿಯಾಗಿ ನಿಲುಗಡೆ ಮಾಡುತ್ತಿರುವುದರಿಂದ ಸುಗಮ ಸಂಚಾರಕ್ಕೆ ಅಡಚಣೆಯಾಗುತ್ತಿರುವುದಲ್ಲದೆ ಆಗಾಗ್ಗೆ ಸಂಚಾರ ಸ್ಥಗಿತಗೊಳ್ಳಲು ಕಾರಣವಾಗುತ್ತಿದೆ. ಸಾರ್ವಜನಿಕ ಹಿತಾಸಕ್ತಿ ಮೇರೆಗೆ ಈ ರಸ್ತೆಯಲ್ಲಿ ಸುಗಮ ಸಂಚಾರದ ದೃಷ್ಟಿಯಿಂದ ರಸ್ತೆಯ ಪಶ್ಚಿಮದ ಕಡೆ ಕಾಫಿಡೇ ವೃತ್ತದ ಕಡೆಯಿಂದ ಎಡಭಾಗದಲ್ಲಿ ಮನೆ ನಂ.12 ರವರೆಗೆ ವಾಹನ ನಿಲುಗಡೆಗೆ ಹಾಗೂ ನಂ.12ರ ನಂತರ ಲ್ಯಾವೆಲ್ಲಿ ರಸ್ತೆವರೆಗೆ ಬಲಭಾಗ ಅಂದರೆ ದಕ್ಷಿಣ ಭಾಗದಲ್ಲಿ ವಾಹನಗಳ ನಿಲುಗಡೆಗೆ ಮತ್ತು ರಸ್ತೆಯ ಮತ್ತೊಂದು ಬದಿಯಲ್ಲಿ ವಾಹನ ನಿಲುಗಡೆಯನ್ನು ನಿಷೇಧಿಸುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶಂಕರ ಬಿದರಿ, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ವಾಲ್ಟನ್ ರಸ್ತೆಯಲ್ಲಿ ವಾಹನ ನಿಲುಗಡೆ ವ್ಯವಸ್ಥೆ ಹಾಗೂ ನಿಷೇಧ ಸಂಬಂಧ ಈ ಕೆಳಕಂಡಂತೆ ಆದೇಶಿಸಿರುತ್ತೇನೆ.

"ವಾಲ್ಟನ್ ರಸ್ತೆಯಲ್ಲಿ ಕಾಫಿಡೇ ವೃತ್ತದ ಕಡೆಯಿಂದ ಪಶ್ಚಿಮದ ಕಡೆಗೆ ಅಂದರೆ ರಸ್ತೆಯ ಎಡಭಾಗ ಮನೆ ನಂ.12ರವರೆಗೆ ಹಾಗೂ ನಂ.12ರ ನಂತರ ರಸ್ತೆಯ ಬಲಭಾಗ ಅಂದರೆ ದಕ್ಷಿಣದ ಕಡೆಗೆ ಲ್ಯಾವೆಲ್ಲಿ ರಸ್ತೆಯ ತನಕ ವಾಹನ ನಿಲುಗಡೆಗೆ ವ್ಯವಸ್ಥೆ ಕಲ್ಪಿಸಿಕೊಟ್ಟು ಇದರ ವಿರುದ್ಧ ದಿಕ್ಕಿನಲ್ಲಿ ಅಂದರೆ ಪೂರ್ವ ಮತ್ತು ಉತ್ತರದ ಕಡೆಗೆ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ"

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ವಾಹನ ನಿಲುಗಡೆ ವ್ಯವಸ್ಥೆ ಹಾಗೂ ನಿಷೇಧ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:15.06.2010 ರಿಂದ ಜಾರಿಗೆ ತಂದು ಸೇತುವೆ ದುರಸ್ಥಿ ಕಾಮಗಾರಿ ಮುಗಿಯುವವರೆಗೂ ಜಾರಿಯಲ್ಲಿರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ:15.06.2010ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಶಂಕರ ಬಿದರಿ**

ಪಿ.ಆರ್.989

ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಾರ್ಯಾಲಯ, ಬಾಗಲಕೋಟೆ**

**ಜ್ಞಾಪನ**

**ಸಂಖ್ಯೆ: ಇ1–ಆಡಳಿತ–ಪ್ರೌಶಾಶಿ–ಗೈಹಾ/ಶಿಕ್ರ–26/2010–11/1093, ದಿನಾಂಕ:15ನೇ ಜೂನ್, 2010**

**ವಿಷಯ:** ದೀರ್ಘಕಾಲ ಶಾಲಾ ಕೆಲಸಕ್ಕೆ ಹಾಜರಾಗದೆ (ಗೈರ ಉಳಿದ) ಕುಮಾರಿ ಸಂಗೀತಾ ಮಲ್ಲನಗೌಡ ಪಾಟೀಲ, ಸಹ ಶಿಕ್ಷಕಿಯರು ಸರ್ಕಾರಿ ಪ್ರೌಢ ಶಾಲೆ, ಕಂದಗಲ್ಲ ತಾಲ್ಲೂಕು, ಹುನಗುಂದ ಇವರ ಮೇಲೆ ಶಿಸ್ತು ಕ್ರಮ ಕುರಿತು.

**ಉಲ್ಲೇಖ:** 1) ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹುನಗುಂದ ಇವರ ವರದಿ ದಿನಾಂಕ:03.05.2010.

2) ಈ ಕಛೇರಿಯ ಸಮಸಂಖ್ಯೆ ನೋಟೀಸ್ ದಿನಾಂಕ:11.05.2010.

3) ದಿನಾಂಕ:15.05.2010ರ ಪ್ರಜಾವಾಣಿ ದಿನಪತ್ರಿಕೆಯಲ್ಲಿ ನೀಡಿದ ಪ್ರಕಟಣೆ.

4) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ18–ಸೇಇವಿ 2001 ಬೆಂಗಳೂರು, ದಿನಾಂಕ:14.09.2001.

**ಪೀಠಿಕೆ:**

ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹುನಗುಂದ ಇವರು ತಮ್ಮ ವಲಯದಲ್ಲಿಯ ಸರ್ಕಾರಿ ಪ್ರೌಢ ಶಾಲೆ, ಕಂದಗಲ್ಲ ತಾಲ್ಲೂಕು, ಹುನಗುಂದ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಕುಮಾರಿ ಸಂಗೀತಾ ಮಲ್ಲನಗೌಡ ಪಾಟೀಲ, ಸಹ ಶಿಕ್ಷಕಿಯರು ಇವರು ದಿನಾಂಕ:17.10.2009 ರಿಂದ ಶಾಲಾ ಕೆಲಸಕ್ಕೆ ಗೈರು ಉಳಿದಿದ್ದು ಇವರಿಗೆ ಸೇವೆಗೆ ಹಾಜರಾಗಲು ಸೂಚನಾ ಪತ್ರ ಕಳುಹಿಸಿದರೂ ಸೇವೆಗೆ ಹಾಜರಾಗಿಲ್ಲ ಇವರ ಗೈರು ಹಾಜರಾತಿಯಿಂದ ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆಯಾಗಿರುವುದಾಗಿ ಉಲ್ಲೇಖ 1ರ ಪ್ರಕಾರ ವರದಿ ಸಲ್ಲಿಸಿದರು. ಈ ಶಿಕ್ಷಕಿಯರಿಗೆ 11.05.2010ರ ದಿನಾಂಕದಂದು ಈ ಕಛೇರಿಯಿಂದಲೂ ಸಹ ನೋಟೀಸ್ ಜಾರಿ ಮಾಡಿ ಅವರ ಗೈರು ಹಾಜರಾತಿ ಬಗ್ಗೆ ವಿವರಣೆಯೊಂದಿಗೆ ಈ ಕಛೇರಿಯ ಅನುಮತಿ ಪಡೆದು ಸೇವೆಗೆ ಹಾಜರಾಗುವಂತೆ ತಿಳಿಸಲಾಗಿತ್ತು. ತಪ್ಪಿದಲ್ಲಿ ಸೇವೆಯಿಂದ ವಜಾ ಮಾಡುವುದಾಗಿ ಸೂಚಿಸಲಾಗಿತ್ತು. ಇದಕ್ಕೂ ಪ್ರತಿಕ್ರಿಯಸದ ಈ ಶಿಕ್ಷಕಿಯರ ಮಾಹಿತಿಗೆ ದಿನಾಂಕ:15.05.2010ರ ಪ್ರಜಾವಾಣಿ ದಿನಪತ್ರಿಕೆಯ ಮೂಲಕ ತಿಳುವಳಿಕೆ ನೀಡಲಾಗಿದ್ದರೂ ಈವರೆಗೂ ಈ ಶಿಕ್ಷಕಿಯರು ಸೇವೆಗೆ ಹಾಜರಾಗುವ ಬಗ್ಗೆ ಪ್ರತಿಕ್ರಿಯಿಸಿರುವುದಿಲ್ಲ. ಇದರಿಂದ ಇವರಿಗೆ ಸೇವೆಯಲ್ಲಿ ಮುಂದುವರಿಯುವ ಇಚ್ಛೆಯಿಲ್ಲವೆಂಬುದಾಗಿ ಪರಿಗಣಿಸಿ ಹಾಗೂ ಇವರ ಗೈರು ಹಾಜರಾತಿಯಿಂದ ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆಯಾಗಿರುವುದನ್ನು ಗಮನಿಸಿ ಈ ಶಿಕ್ಷಕರ ಮೇಲೆ ಕೆಳಗಿನಂತೆ ಕ್ರಮ ಜರುಗಿಸಲಾಗಿದೆ.

**ಆದೇಶ**

ಪೀಠಿಕೆಯಲ್ಲಿ ವಿವರಿಸಲಾದ ಕಾರಣಗಳಿಂದ ಹಾಗೂ ದೀರ್ಘ ಅವಧಿಯಿಂದ ಶಾಲಾ ಕೆಲಸಕ್ಕೆ ಗೈರು ಉಳಿದು ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆ ಮಾಡಿದ ಕುಮಾರಿ ಸಂಗೀತಾ ಮಲ್ಲನಗೌಡ ಪಾಟೀಲ, ಸಹ ಶಿಕ್ಷಕಿಯರು ಸರ್ಕಾರಿ ಪ್ರೌಢ ಶಾಲೆ, ಕಂದಗಲ್ಲ ತಾಲ್ಲೂಕು, ಹುನಗುಂದ ಇವರ ಮೇಲೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ 1957ರ ನಿಯಮ 9(2) ಸಿ ದಲ್ಲಿಯ ಅಧಿಕಾರ ಚಲಾಯಿಸಿ ಉಲ್ಲೇಖ 4ರ ಸರ್ಕಾರದ ಅಧಿಸೂಚನೆ ಮತ್ತು ಕೆ.ಸಿ.ಎಸ್.ಆರ್. ನಿಯಮ 108ರ ನಿಯಮದನ್ವಯ ಇವರನ್ನು ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹುನಗುಂದ ಇವರು ಈ ಆದೇಶದ ವಿವರವನ್ನು ಸಂಬಂಧಿಸಿದ ಶಿಕ್ಷಕರ ಸೇವಾ ಪುಸ್ತಕದಲ್ಲಿ ತಪ್ಪದೇ ದಾಖಲಿಸಿ ಮುಂದಿನ ಅವಶ್ಯಕ ಕ್ರಮ ಕೈಗೊಳ್ಳುವಂತೆ ಸೂಚಿಸಿದೆ.

ಉಪ ನಿರ್ದೇಶಕರು (ಆಡಳಿತ)

ಪಿ.ಆರ್.990 ಸಾರ್ವಜನಿಕ ಶಿಕ್ಷಣ ಇಲಾಖೆ, ಬಾಗಲಕೋಟೆ.

**ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಾರ್ಯಾಲಯ, ಬಾಗಲಕೋಟೆ**

**ಜ್ಞಾಪನ**

**ಸಂಖ್ಯೆ: ಇ1–ಆಡಳಿತ–ಪ್ರೌಶಾಶಿ–ಗೈಹಾ/ಶಿಕ್ರ–26/2010–11/1092, ದಿನಾಂಕ:15ನೇ ಜೂನ್, 2010**

**ವಿಷಯ:** ದೀರ್ಘಕಾಲ ಶಾಲಾ ಕೆಲಸಕ್ಕೆ ಹಾಜರಾಗದೆ (ಗೈರ ಉಳಿದ) ಶ್ರೀ ತಿಪ್ಪಣ್ಣ ಯಮನಪ್ಪ ಬಬಲೇಶ್ವರ, ಸಹ ಶಿಕ್ಷಕರು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಚಿಂತಕಮಲದಿನ್ನಿ, ತಾಲ್ಲೂಕು ಹುನಗುಂದ ಇವರ ಮೇಲೆ ಶಿಸ್ತು ಕ್ರಮ ಕುರಿತು.

**ಉಲ್ಲೇಖ:** 1) ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹುನಗುಂದ ಇವರ ವರದಿ ದಿನಾಂಕ:03.05.2010.

2) ಈ ಕಛೇರಿಯ ಸಮಸಂಖ್ಯೆ ನೋಟೀಸ್ ದಿನಾಂಕ:11.05.2010.

3) ದಿನಾಂಕ:15.05.2010ರ ಪ್ರಜಾವಾಣಿ ದಿನಪತ್ರಿಕೆಯಲ್ಲಿ ನೀಡಿದ ಪ್ರಕಟಣೆ.

4) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ18–ಸೇಇವಿ 2001 ಬೆಂಗಳೂರು, ದಿನಾಂಕ:14.09.2001.

**ಪೀಠಿಕೆ:**

ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹುನಗುಂದ ಇವರು ತಮ್ಮ ವಲಯದಲ್ಲಿಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಚಿಂತಕಮಲದಿನ್ನಿ, ತಾಲ್ಲೂಕು ಹುನಗುಂದ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ತಿಪ್ಪಣ್ಣ ಯಮನಪ್ಪ ಬಬಲೇಶ್ವರ, ಸಹ ಶಿಕ್ಷಕರು ಇವರು ದಿನಾಂಕ:29.01.2009 ರಿಂದ ಶಾಲಾ ಕೆಲಸಕ್ಕೆ ಗೈರು ಉಳಿದಿದ್ದು ಇವರಿಗೆ ಸೇವೆಗೆ ಹಾಜರಾಗಲು ಸೂಚನಾ ಪತ್ರ ಕಳುಹಿಸಿದರೂ ಸೇವೆಗೆ ಹಾಜರಾಗಿಲ್ಲ ಇವರ ಗೈರು ಹಾಜರಾತಿಯಿಂದ ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆಯಾಗಿರುವುದಾಗಿ ಉಲ್ಲೇಖ 1ರ ಪ್ರಕಾರ ವರದಿ ಸಲ್ಲಿಸಿದರು. ಈ ಶಿಕ್ಷಕರಿಗೆ 11.05.2010ರ ದಿನಾಂಕದಂದು ಈ ಕಛೇರಿಯಿಂದಲೂ ಸಹ ನೋಟೀಸ್ ಜಾರಿ ಮಾಡಿ ಅವರ ಗೈರು ಹಾಜರಾತಿ ಬಗ್ಗೆ ವಿವರಣೆಯೊಂದಿಗೆ ಈ ಕಛೇರಿಯ ಅನುಮತಿ ಪಡೆದು ಸೇವೆಗೆ ಹಾಜರಾಗುವಂತೆ ತಿಳಿಸಲಾಗಿತ್ತು. ತಪ್ಪಿದಲ್ಲಿ ಸೇವೆಯಿಂದ ವಜಾ ಮಾಡುವುದಾಗಿ ಸೂಚಿಸಲಾಗಿತ್ತು. ಇದಕ್ಕೂ ಪ್ರತಿಕ್ರಿಯಸದ ಈ ಶಿಕ್ಷಕರ ಮಾಹಿತಿಗೆ ದಿನಾಂಕ:15.05.2010ರ ಪ್ರಜಾವಾಣಿ ದಿನಪತ್ರಿಕೆಯ ಮೂಲಕ ತಿಳುವಳಿಕೆ ನೀಡಲಾಗಿದ್ದರೂ ಈವರೆಗೂ ಈ ಶಿಕ್ಷಕರು ಸೇವೆಗೆ ಹಾಜರಾಗುವ ಬಗ್ಗೆ ಪ್ರತಿಕ್ರಿಯಿಸಿರುವುದಿಲ್ಲ. ಇದರಿಂದ ಇವರಿಗೆ ಸೇವೆಯಲ್ಲಿ ಮುಂದುವರಿಯುವ ಇಚ್ಛೆಯಿಲ್ಲವೆಂಬುದಾಗಿ ಪರಿಗಣಿಸಿ ಹಾಗೂ ಇವರ ಗೈರು ಹಾಜರಾತಿಯಿಂದ ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆಯಾಗಿರುವುದನ್ನು ಗಮನಿಸಿ ಈ ಶಿಕ್ಷಕರ ಮೇಲೆ ಕೆಳಗಿನಂತೆ ಕ್ರಮ ಜರುಗಿಸಲಾಗಿದೆ.

**ಆದೇಶ**

ಪೀಠಿಕೆಯಲ್ಲಿ ವಿವರಿಸಲಾದ ಕಾರಣಗಳಿಂದ ಹಾಗೂ ದೀರ್ಘ ಅವಧಿಯಿಂದ ಶಾಲಾ ಕೆಲಸಕ್ಕೆ ಗೈರು ಉಳಿದು ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆ ಮಾಡಿದ ಶ್ರೀ ತಿಪ್ಪಣ್ಣ ಯಮನಪ್ಪ ಬಬಲೇಶ್ವರ, ಸಹ ಶಿಕ್ಷಕರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಚಿಂತಕಮಲದಿನ್ನಿ, ತಾಲ್ಲೂಕು ಹುನಗುಂದ ಇವರ ಮೇಲೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ 1957ರ ನಿಯಮ 9(2) ಸಿ ದಲ್ಲಿಯ ಅಧಿಕಾರ ಚಲಾಯಿಸಿ ಉಲ್ಲೇಖ 4ರ ಸರ್ಕಾರದ ಅಧಿಸೂಚನೆ ಮತ್ತು ಕೆ.ಸಿ.ಎಸ್.ಆರ್. ನಿಯಮ 108ರ ನಿಯಮದನ್ವಯ ಇವರನ್ನು ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹುನಗುಂದ ಇವರು ಈ ಆದೇಶದ ವಿವರವನ್ನು ಸಂಬಂಧಿಸಿದ ಶಿಕ್ಷಕರ ಸೇವಾ ಪುಸ್ತಕದಲ್ಲಿ ತಪ್ಪದೇ ದಾಖಲಿಸಿ ಮುಂದಿನ ಅವಶ್ಯಕ ಕ್ರಮ ಕೈಗೊಳ್ಳುವಂತೆ ಸೂಚಿಸಿದೆ.

ಉಪ ನಿರ್ದೇಶಕರು (ಆಡಳಿತ)

ಪಿ.ಆರ್.991 ಸಾರ್ವಜನಿಕ ಶಿಕ್ಷಣ ಇಲಾಖೆ, ಬಾಗಲಕೋಟೆ.

**ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಾರ್ಯಾಲಯ, ಬಾಗಲಕೋಟೆ**

**ಜ್ಞಾಪನ**

**ಸಂಖ್ಯೆ: ಇ1–ಆಡಳಿತ–ಪ್ರೌಶಾಶಿ–ಗೈಹಾ/ಶಿಕ್ರ–26/2010–11/1091, ದಿನಾಂಕ:15ನೇ ಜೂನ್, 2010**

**ವಿಷಯ:** ದೀರ್ಘಕಾಲ ಶಾಲಾ ಕೆಲಸಕ್ಕೆ ಹಾಜರಾಗದೆ (ಗೈರ ಉಳಿದ) ಶ್ರೀಮತಿ ಡಿ.ಜೆ. ಸಮ್ಮತಶೆಟ್ಟಿ, ಸಹ ಶಿಕ್ಷಕಿಯರು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಚಿನಗುಂಡಿ, ತಾ: ಜಮಖಂಡಿ ಇವರ ಮೇಲೆ ಶಿಸ್ತು ಕ್ರಮ ಕುರಿತು.

**ಉಲ್ಲೇಖ:** 1) ಕ್ಷೇತ್ರ ಶಿಕ್ಷಣಾಧಿಕಾರಿಗಳು, ಜಮಖಂಡಿ ಇವರ ವರದಿ ದಿನಾಂಕ:03.05.2010.

2) ಈ ಕಛೇರಿಯ ಸಮಸಂಖ್ಯೆ ನೋಟೀಸ್ ದಿನಾಂಕ:11.05.2010.

3) ದಿನಾಂಕ:15.05.2010ರ ಪ್ರಜಾವಾಣಿ ದಿನಪತ್ರಿಕೆಯಲ್ಲಿ ನೀಡಿದ ಪ್ರಕಟಣೆ.

4) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ18–ಸೇಇವಿ 2001 ಬೆಂಗಳೂರು, ದಿನಾಂಕ:14.09.2001.

**ಪೀಠಿಕೆ:**

ಕ್ಷೇತ್ರ ಶಿಕ್ಷಣಾಧಿಕಾರಿಗಳು, ಜಮಖಂಡಿ ಇವರು ತಮ್ಮ ವಲಯದಲ್ಲಿಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಚಿನಗುಂಡಿ, ತಾ:ಜಮಖಂಡಿ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀಮತಿ ಡಿ.ಜೆ. ಸಮ್ಮತಶೆಟ್ಟಿ, ಸಹ ಶಿಕ್ಷಕಿಯರು ಇವರು

ದಿನಾಂಕ:31.10.2007 ರಿಂದ ಶಾಲಾ ಕೆಲಸಕ್ಕೆ ಗೈರು ಉಳಿದಿದ್ದು ಇವರಿಗೆ ಸೇವೆಗೆ ಹಾಜರಾಗಲು ಸೂಚನಾ ಪತ್ರ ಕಳುಹಿಸಿದರೂ ಸೇವೆಗೆ ಹಾಜರಾಗಿಲ್ಲ ಇವರ ಗೈರು ಹಾಜರಾತಿಯಿಂದ ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆಯಾಗಿರುವುದಾಗಿ ಉಲ್ಲೇಖ 1ರ ಪ್ರಕಾರ ವರದಿ ಸಲ್ಲಿಸಿದರು. ಈ ಶಿಕ್ಷಕಿಯರಿಗೆ 11.05.2010ರ ದಿನಾಂಕದಂದು ಈ ಕಛೇರಿಯಿಂದಲೂ ಸಹ ನೋಟೀಸ್ ಜಾರಿ ಮಾಡಿ ಅವರ ಗೈರು ಹಾಜರಾತಿ ಬಗ್ಗೆ ವಿವರಣೆಯೊಂದಿಗೆ ಈ ಕಛೇರಿಯ ಅನುಮತಿ ಪಡೆದು ಸೇವೆಗೆ ಹಾಜರಾಗುವಂತೆ ತಿಳಿಸಲಾಗಿತ್ತು. ತಪ್ಪಿದಲ್ಲಿ ಸೇವೆಯಿಂದ ವಜಾ ಮಾಡುವುದಾಗಿ ಸೂಚಿಸಲಾಗಿತ್ತು. ಇದಕ್ಕೂ ಪ್ರತಿಕ್ರಿಯಸದ ಈ ಶಿಕ್ಷಕಿಯರ ಮಾಹಿತಿಗೆ ದಿನಾಂಕ:15.05.2010ರ ಪ್ರಜಾವಾಣಿ ದಿನಪತ್ರಿಕೆಯ ಮೂಲಕ ತಿಳುವಳಿಕೆ ನೀಡಲಾಗಿದ್ದರೂ ಈವರೆಗೂ ಈ ಶಿಕ್ಷಕಿಯರು ಸೇವೆಗೆ ಹಾಜರಾಗುವ ಬಗ್ಗೆ ಪ್ರತಿಕ್ರಿಯಿಸಿರುವುದಿಲ್ಲ. ಇದರಿಂದ ಇವರಿಗೆ ಸೇವೆಯಲ್ಲಿ ಮುಂದುವರಿಯುವ ಇಚ್ಛೆಯಿಲ್ಲವೆಂಬುದಾಗಿ ಪರಿಗಣಿಸಿ ಹಾಗೂ ಇವರ ಗೈರು ಹಾಜರಾತಿಯಿಂದ ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆಯಾಗಿರುವುದನ್ನು ಗಮನಿಸಿ ಈ ಶಿಕ್ಷಕರ ಮೇಲೆ ಕೆಳಗಿನಂತೆ ಕ್ರಮ ಜರುಗಿಸಲಾಗಿದೆ.

**ಆದೇಶ**

ಪೀಠಿಕೆಯಲ್ಲಿ ವಿವರಿಸಲಾದ ಕಾರಣಗಳಿಂದ ಹಾಗೂ ದೀರ್ಘ ಅವಧಿಯಿಂದ ಶಾಲಾ ಕೆಲಸಕ್ಕೆ ಗೈರು ಉಳಿದು ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆ ಮಾಡಿದ ಶ್ರೀಮತಿ ಡಿ.ಜೆ. ಸಮ್ಮತಶೆಟ್ಟಿ, ಸಹ ಶಿಕ್ಷಕಿಯರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಚಿನಗುಂಡಿ, ತಾಲ್ಲೂಕು ಜಮಖಂಡಿ ಇವರ ಮೇಲೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ 1957ರ ನಿಯಮ 9(2) ಸಿ ದಲ್ಲಿಯ ಅಧಿಕಾರ ಚಲಾಯಿಸಿ ಉಲ್ಲೇಖ 4ರ ಸರ್ಕಾರದ ಅಧಿಸೂಚನೆ ಮತ್ತು ಕೆ.ಸಿ.ಎಸ್.ಆರ್. ನಿಯಮ 108ರ ನಿಯಮದನ್ವಯ ಇವರನ್ನು ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಕ್ಷೇತ್ರ ಶಿಕ್ಷಣಾಧಿಕಾರಿಗಳು, ಜಮಖಂಡಿ ಇವರು ಈ ಆದೇಶದ ವಿವರವನ್ನು ಸಂಬಂಧಿಸಿದ ಶಿಕ್ಷಕರ ಸೇವಾ ಪುಸ್ತಕದಲ್ಲಿ ತಪ್ಪದೇ ದಾಖಲಿಸಿ ಮುಂದಿನ ಅವಶ್ಯಕ ಕ್ರಮ ಕೈಗೊಳ್ಳುವಂತೆ ಸೂಚಿಸಿದೆ.

ಉಪ ನಿರ್ದೇಶಕರು (ಆಡಳಿತ)

ಪಿ.ಆರ್.992 ಸಾರ್ವಜನಿಕ ಶಿಕ್ಷಣ ಇಲಾಖೆ, ಬಾಗಲಕೋಟೆ.

**ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಾರ್ಯಾಲಯ, ಬಾಗಲಕೋಟೆ**

**ಜ್ಞಾಪನ**

**ಸಂಖ್ಯೆ: ಇ1–ಆಡಳಿತ–ಪ್ರೌಶಾಶಿ–ಗೈಹಾ/ಶಿಕ್ರ–26/2010–11/1090, ದಿನಾಂಕ:15ನೇ ಜೂನ್, 2010**

**ವಿಷಯ:** ದೀರ್ಘಕಾಲ ಶಾಲಾ ಕೆಲಸಕ್ಕೆ ಹಾಜರಾಗದೆ (ಗೈರ ಉಳಿದ) ಶ್ರೀಮತಿ ಶೋಭಾ ಜಿ. ಸಾಲಿಮಠ, ಸಹ ಶಿಕ್ಷಕಿಯರು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಅಮರಾವತಿ, ತಾ: ಹುನಗುಂದ ಇವರ ಮೇಲೆ ಶಿಸ್ತು ಕ್ರಮ ಕುರಿತು.

**ಉಲ್ಲೇಖ:** 1) ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹುನಗುಂದ ಇವರ ವರದಿ ದಿನಾಂಕ:03.05.2010.

2) ಈ ಕಛೇರಿಯ ಸಮಸಂಖ್ಯೆ ನೋಟೀಸ್ ದಿನಾಂಕ:11.05.2010.

3) ದಿನಾಂಕ:15.05.2010ರ ಪ್ರಜಾವಾಣಿ ದಿನಪತ್ರಿಕೆಯಲ್ಲಿ ನೀಡಿದ ಪ್ರಕಟಣೆ.

4) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ18–ಸೇಇವಿ 2001 ಬೆಂಗಳೂರು, ದಿನಾಂಕ:14.09.2001.

**ಪೀಠಿಕೆ:**

ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹುನಗುಂದ ಇವರು ತಮ್ಮ ವಲಯದಲ್ಲಿಯ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಅಮರಾವತಿ, ತಾ: ಹುನಗುಂದ ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀಮತಿ ಶೋಭಾ ಜಿ. ಸಾಲಿಮಠ, ಸಹ ಶಿಕ್ಷಕಿಯರು ಇವರು ದಿನಾಂಕ:06.01.2009 ರಿಂದ ಶಾಲಾ ಕೆಲಸಕ್ಕೆ ಗೈರು ಉಳಿದಿದ್ದು ಇವರಿಗೆ ಸೇವೆಗೆ ಹಾಜರಾಗಲು ಸೂಚನಾ ಪತ್ರ ಕಳುಹಿಸಿದರೂ ಸೇವೆಗೆ ಹಾಜರಾಗಿಲ್ಲ ಇವರ ಗೈರು ಹಾಜರಾತಿಯಿಂದ ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆಯಾಗಿರುವುದಾಗಿ ಉಲ್ಲೇಖ 1ರ ಪ್ರಕಾರ ವರದಿ ಸಲ್ಲಿಸಿದರು. ಈ ಶಿಕ್ಷಕಿಯರಿಗೆ 11.05.2010ರ ದಿನಾಂಕದಂದು ಈ ಕಛೇರಿಯಿಂದಲೂ ಸಹ ನೋಟೀಸ್ ಜಾರಿ ಮಾಡಿ ಅವರ ಗೈರು ಹಾಜರಾತಿ ಬಗ್ಗೆ ವಿವರಣೆಯೊಂದಿಗೆ ಈ ಕಛೇರಿಯ ಅನುಮತಿ ಪಡೆದು ಸೇವೆಗೆ ಹಾಜರಾಗುವಂತೆ ತಿಳಿಸಲಾಗಿತ್ತು. ತಪ್ಪಿದಲ್ಲಿ ಸೇವೆಯಿಂದ ವಜಾ ಮಾಡುವುದಾಗಿ ಸೂಚಿಸಲಾಗಿತ್ತು. ಇದಕ್ಕೂ ಪ್ರತಿಕ್ರಿಯಸದ ಈ ಶಿಕ್ಷಕಿಯರ ಮಾಹಿತಿಗೆ ದಿನಾಂಕ:15.05.2010ರ ಪ್ರಜಾವಾಣಿ ದಿನಪತ್ರಿಕೆಯ ಮೂಲಕ ತಿಳುವಳಿಕೆ

ನೀಡಲಾಗಿದ್ದರೂ ಈವರೆಗೂ ಈ ಶಿಕ್ಷಕಿಯರು ಸೇವೆಗೆ ಹಾಜರಾಗುವ ಬಗ್ಗೆ ಪ್ರತಿಕ್ರಿಯಿಸಿರುವುದಿಲ್ಲ. ಇದರಿಂದ ಇವರಿಗೆ ಸೇವೆಯಲ್ಲಿ ಮುಂದುವರಿಯುವ ಇಚ್ಛೆಯಿಲ್ಲವೆಂಬುದಾಗಿ ಪರಿಗಣಿಸಿ ಹಾಗೂ ಇವರ ಗೈರು ಹಾಜರಾತಿಯಿಂದ ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆಯಾಗಿರುವುದನ್ನು ಗಮನಿಸಿ ಈ ಶಿಕ್ಷಕರ ಮೇಲೆ ಕೆಳಗಿನಂತೆ ಕ್ರಮ ಜರುಗಿಸಲಾಗಿದೆ.

**ಆದೇಶ**

ಪೀಠಿಕೆಯಲ್ಲಿ ವಿವರಿಸಲಾದ ಕಾರಣಗಳಿಂದ ಹಾಗೂ ದೀರ್ಘ ಅವಧಿಯಿಂದ ಶಾಲಾ ಕೆಲಸಕ್ಕೆ ಗೈರು ಉಳಿದು ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆ ಮಾಡಿದ ಶ್ರೀಮತಿ ಶೋಭಾ ಜಿ. ಸಾಲಿಮಠ, ಸಹ ಶಿಕ್ಷಕಿಯರು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಅಮರಾವತಿ, ತಾಲ್ಲೂಕು ಹುನಗುಂದ ಇವರ ಮೇಲೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ 1957ರ ನಿಯಮ 9(2) ಸಿ ದಲ್ಲಿಯ ಅಧಿಕಾರ ಚಲಾಯಿಸಿ ಉಲ್ಲೇಖ 4ರ ಸರ್ಕಾರದ ಅಧಿಸೂಚನೆ ಮತ್ತು ಕೆ.ಸಿ.ಎಸ್.ಆರ್. ನಿಯಮ 108ರ ನಿಯಮದನ್ವಯ ಇವರನ್ನು ಕೂಡಲೇ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಕ್ಷೇತ್ರ ಶಿಕ್ಷಣಾಧಿಕಾರಿಗಳು, ಹುನಗುಂದ ಇವರು ಈ ಆದೇಶದ ವಿವರವನ್ನು ಸಂಬಂಧಿಸಿದ ಶಿಕ್ಷಕರ ಸೇವಾ ಪುಸ್ತಕದಲ್ಲಿ ತಪ್ಪದೇ ದಾಖಲಿಸಿ ಮುಂದಿನ ಅವಶ್ಯಕ ಕ್ರಮ ಕೈಗೊಳ್ಳುವಂತೆ ಸೂಚಿಸಿದೆ.

ಉಪ ನಿರ್ದೇಶಕರು (ಆಡಳಿತ)

ಪಿ.ಆರ್.993 ಸಾರ್ವಜನಿಕ ಶಿಕ್ಷಣ ಇಲಾಖೆ, ಬಾಗಲಕೋಟೆ.

**ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ವಾಕೈ23 ಜಕೈಸೇ 2010, ಬೆಂಗಳೂರು, ದಿನಾಂಕ:19ನೇ ಜೂನ್, 2010**

**ವಿಷಯ:** ಕೈಮಗ್ಗ ಮತ್ತು ಜವಳಿ ಇಲಾಖೆಯ ಸಹಾಯಕ ನಿರ್ದೇಶಕರ ತಾತ್ಕಾಲಿಕ ಜೇಷ್ಠತಾ ಪಟ್ಟಿ ಕುರಿತು.

ಕೈಮಗ್ಗ ಮತ್ತು ಜವಳಿ ಇಲಾಖೆಯ ಸಹಾಯಕ ನಿರ್ದೇಶಕರ ವೃಂದದ ತಾತ್ಕಾಲಿಕ ಕರಡು ಜೇಷ್ಠತಾ ಪಟ್ಟಿಯನ್ನು ದಿನಾಂಕ:01.01.2010 ರಲ್ಲಿದ್ದಂತೆ ತಯಾರಿಸಿ, ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ ಪ್ರಕಟಿಸಿದೆ. ಆ ಕುರಿತಂತೆ ಯಾವುದೇ ಆಕ್ಷೇಪಣೆ/ ಸಲಹೆಗಳಿದ್ದಲ್ಲಿ, ಅವುಗಳನ್ನು ಈ ಅಧಿಸೂಚನೆ ಪ್ರಕಟಿಸಿದ 15 ದಿನಗಳೊಳಗೆ ಸರ್ಕಾರದ ಕಾರ್ಯದರ್ಶಿಗಳು, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸಸೌಧ, ಬೆಂಗಳೂರು ಇವರಿಗೆ ತಲುಪುವಂತೆ ಸಲ್ಲಿಸಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಗಣಪತಿ**

ಸರ್ಕಾರದ ಉಪ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ದಿನಾಂಕ:01.01.2010ರಲ್ಲಿದ್ದಂತೆ ಕೈಮಗ್ಗ ಮತ್ತು ಜವಳಿ ಇಲಾಖೆಯ ಸಹಾಯಕ ನಿರ್ದೇಶಕರ ತಾತ್ಕಾಲಿಕ ಜೇಷ್ಠತಾ ಪಟ್ಟಿ.**

**ವೇತನ ಶ್ರೇಣಿ ರೂ.12000–22650**

| ಕ್ರ. ಸಂ. | ಅಧಿಕಾರಿಗಳ ಹೆಸರು ಶ್ರೀಯುತರಾದ | ನೇರ ನೇಮಕಾತಿ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯಲ್ಲಿ ಮುಂಬಡ್ತಿ/ ಹೊಂದಿದ ದಿನಾಂಕ | ಜೇಷ್ಠತೆಗೆ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 1. | ಎಸ್. ಜಗದೀಶ್ | ಮುಂಬಡ್ತಿ | 10.01.1959 | 16.01.1986 | 06.02.2008 | 06.02.2008 | – |
| 2. | ಎಸ್.ಎಸ್. ಫಡಕೆ | ಮುಂಬಡ್ತಿ | 07.07.1963 | 16.01.1986 | 06.02.2008 | 06.02.2008 | – |
| 3. | ದಿನೇಶ್ ಕೆ. ಹೆಬ್ಬಾರ್ | ಮುಂಬಡ್ತಿ | 30.10.1962 | 16.01.1986 | 06.02.2008 | 06.02.2008 | – |
| 4. | ವೈ.ಎನ್. ಹಾವರ್ಗಿ | ಮುಂಬಡ್ತಿ | 01.06.1962 | 16.01.1986 | 06.02.2008 | 06.02.2008 | – |
| 5. | ಎಂ.ಎಸ್. ಅತ್ತೀಮರದ್ | ಮುಂಬಡ್ತಿ | 25.05.1963 | 16.01.1986 | 06.02.2008 | 06.02.2008 | – |

| ಕ್ರ. ಸಂ. | ಅಧಿಕಾರಿಗಳ ಹೆಸರು ಶ್ರೀಯುತರಾದ | ನೇರ ನೇಮಕಾತಿ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯಲ್ಲಿ ಮುಂಬಡ್ತಿ/ ಹೊಂದಿದ ದಿನಾಂಕ | ಜೇಷ್ಠತೆಗೆ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|
| 6. | ಬಿ.ಆರ್. ಯೋಗೀಶ್ | ಮುಂಬಡ್ತಿ | 22.07.1967 | 22.11.1990 | 06.02.2008 | 06.02.2008 | – |
| 7. | ವೀರೇಶ್ ಎಸ್. ಧವಳೆ | ಮುಂಬಡ್ತಿ | 29.11.1964 | 16.01.1986 | 05.05.2008 | 05.05.2008 | – |
| 8. | ಆರ್. ಲಿಂಗರಾಜು | ಮುಂಬಡ್ತಿ | 01.06.1965 | 16.01.1986 | 05.05.2008 | 05.05.2008 | – |
| 9. | ಸಿ. ರವಿಕುಮಾರ್ | ಮುಂಬಡ್ತಿ | 12.03.1965 | 01.09.1989 | 05.05.2008 | 05.05.2008 | – |
| 10. | ವಾಸುದೇವ ದೊಡ್ಡಮನಿ | ಮುಂಬಡ್ತಿ | 01.06.1966 | 18.12.1990 | 05.05.2008 | 05.05.2008 | – |
| 11. | ಎನ್.ಟಿ. ನೆಗಳೂರು | ಮುಂಬಡ್ತಿ | 01.06.1964 | 12.09.1988 | 27.02.2009 | 27.02.2009 | – |
| 12. | ಸಫಾರೆ ಶ್ರೀನಿವಾಸ | ಮುಂಬಡ್ತಿ | 01.06.1966 | 12.09.1988 | 27.02.2009 | 27.02.2009 | – |
| 13. | ಜನಾರ್ಧನ್ | ಮುಂಬಡ್ತಿ | 24.05.1964 | 12.09.1988 | 27.02.2009 | 27.02.2009 | – |
| 14. | ಗಂಗಯ್ಯ | ಮುಂಬಡ್ತಿ | 23.02.1963 | 28.11.1991 | 27.02.2009 | 27.02.2009 | – |

**ಎಂ.ಎಸ್. ಗಣಪತಿ**

ಪಿ.ಆರ್.994

ಸರ್ಕಾರದ ಉಪ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಸೂಪರಿಂಟೆಂಡಿಂಗ್ ಇಂಜಿನೀಯರರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವೃತ್ತ, ಧಾರವಾಡ–1**

**ಅಧಿಸೂಚನೆ**

**ನಂ.ರಾಹೆವೃ:ಧಾ:ಸಿ–1:2010–11/466, ದಿನಾಂಕ:23ನೇ ಜೂನ್, 2010**

**ವಿಷಯ:** ರಾಷ್ಟ್ರೀಯ ಹೆದ್ದಾರಿ ವೃತ್ತ, ಧಾರವಾಡ ಕಾರ್ಯಾಲಯದ ಪ್ರಭಾರ ವಹಿಸಿಕೊಂಡ ಬಗ್ಗೆ.

**ಉಲ್ಲೇಖ:** ಸರ್ಕಾರದ ಅಧಿಸೂಚನೆ ನಂ.ಸಂ.ಲೋಇ:60:ಸೇಎಸು:2010, ದಿನಾಂಕ:17.06.2010.

ನಾನು ಇಂದು ದಿನಾಂಕ:21.06.2010 ಪೂರ್ವಾಹ್ನ ಸೂಪರಿಂಟೆಂಡಿಂಗ್ ಇಂಜಿನೀಯರರು ರಾಷ್ಟ್ರೀಯ ಹೆದ್ದಾರಿ ವೃತ್ತ ಧಾರವಾಡದ ಹುದ್ದೆಯ ಪ್ರಭಾರವನ್ನು ವಹಿಸಿಕೊಂಡಿದ್ದೇನೆ.

ನನ್ನನ್ನುದ್ದೇಶಿಸಿ ಬರೆಯುವ ಎಲ್ಲಾ ಅರೇ ಸರ್ಕಾರಿ ಪತ್ರಗಳು ಮತ್ತು ರಹಸ್ಯ ಪತ್ರಗಳನ್ನು ಕಳುಹಿಸುವ ವಿಳಾಸ ಈ ಕೆಳಗಿನಂತಿದೆ.

ಶ್ರೀ ಅರವಿಂದ ಡಿ. ಕಣಗಿಲ್,

ಕೆ.ಇ.ಎಸ್.

ಸೂಪರಿಂಟೆಂಡಿಂಗ್ ಇಂಜಿನೀಯರರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಜಿಲ್ಲಾಧಿಕಾರಿಗಳ ಆವರಣ,

ಧಾರವಾಡ–580 001.

ಕಛೇರಿ ದೂರವಾಣಿ ಸಂಖ್ಯೆ: 0836 2448545

ವೈಯಕ್ತಿಕ (ಕಛೇರಿ) : 0836 2741713

ಫ್ಯಾಕ್ಸ್ : 0836 2741871

ಮೊಬೈಲ್ : 9845326025.

**ಅರವಿಂದ ಡಿ. ಕಣಗಿಲ್**

ಪಿ.ಆರ್.1006

ಸೂಪರಿಂಟೆಂಡಿಂಗ್ ಇಂಜಿನೀಯರರು,

ರಾಷ್ಟ್ರೀಯ ಹೆದ್ದಾರಿ ವೃತ್ತ, ಧಾರವಾಡ.

## ಪೊಲೀಸ್ ಇಲಾಖೆ

## ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1, ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ

## ಅಧಿಸೂಚನೆ

**ಸಂಖ್ಯೆ: 11/ಅಸೂ/ಡಿಸಿಪಿ/ಸಂಪೂ/2010, ಬೆಂಗಳೂರು, ದಿನಾಂಕ:25ನೇ ಜೂನ್, 2010**

ಬೆಂಗಳೂರು ನಗರ– ಹೈಗ್ರೌಂಡ್ಸ್ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಗೆ ಬರುವ ಸಂಪಿಗೆ ರಸ್ತೆಯಲ್ಲಿ ಇತ್ತೀಚಿಗೆ ಪಶ್ಚಿಮ ಭಾಗದಲ್ಲಿ "ಮಂತ್ರಿ ಷಾಪಿಂಗ್ ಮಾಲ್" ಪ್ರಾರಂಭವಾಗಿದ್ದು, ಇದರ ಆಕರ್ಷಣೆಯಿಂದ ನಗರದ ನಾನಾ ಕಡೆಯಿಂದ ಸಾರ್ವಜನಿಕರು ವ್ಯವಹಾರ ನಿಮಿತ್ತ ಪ್ರತಿನಿತ್ಯ ವಾಹನಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಆಗಮಿಸುತ್ತಿರುವುದರಿಂದ ಸ್ಥಳದಲ್ಲಿ ವಾಹನಗಳ ನಿಲುಗಡೆಗೆ ಸೂಕ್ತವಾದ ಸ್ಥಳಾವಕಾಶದ ಅಭಾವದಿಂದಾಗಿ ಸಂಪಿಗೆ ರಸ್ತೆ ಹಾಗೂ ಕ್ರಾಸ್ ರಸ್ತೆಗಳಲ್ಲಿ ವಾಹನಗಳನ್ನು ನಿಲುಗಡೆ ಮಾಡುತ್ತಿರುವ ಕಾರಣ ಸುತ್ತಮುತ್ತಲಿನ ಪ್ರದೇಶದಲ್ಲಿ ವಾಹನ ಸಂಚಾರ ಅಧಿಕಗೊಂಡು ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿರುವುದು ಮತ್ತು ವಾಹನ ಸಂಚಾರದಲ್ಲಿ ನಿಧಾನಗತಿ ಹಾಗೂ ಆಗಾಗ್ಗೆ ಸಂಚಾರ ಸ್ಥಗಿತಗೊಳ್ಳುತ್ತಿರುವುದು ಸಾಮಾನ್ಯವಾಗಿದೆ. ಹಾಗೆಯೇ ಇದೇ ರಸ್ತೆಯಲ್ಲಿ ಬಿ.ಬಿ.ಎಂ.ಪಿ. ಕಛೇರಿಗೆ, ಗಾಂಧಿನಗರ ಕ್ಷೇತ್ರದ ಶಾಸಕರ ಕಛೇರಿ ಮತ್ತು ಇಬ್ಬರು ನಗರ ಸಭಾ ಸದಸ್ಯರ ಕಛೇರಿಗಳಿದ್ದು, ಈ ಕಛೇರಿಗಳಿಗೆ ಕಾರ್ಯನಿಮಿತ್ತ ಭೇಟಿ ನೀಡುವ ಕಾರ್ಯಕರ್ತರ ವಾಹನಗಳಿಗೆ ನಿಲುಗಡೆ ವ್ಯವಸ್ಥೆಯನ್ನು ಕಲ್ಪಿಸಿಕೊಡಬೇಕಾಗಿರುತ್ತದೆ. ಈ ರಸ್ತೆಯಲ್ಲಿ ಸಾರ್ವಜನಿಕರ ಹಿತದೃಷ್ಟಿಯಿಂದ ಸಂಚಾರ ದಟ್ಟಣೆಯನ್ನು ವ್ಯವಸ್ಥಿತವಾಗಿ ನಿಯಂತ್ರಿಸಲು ಹಾಗೂ ಸಂಚಾರವು ಸರಾಗವಾಗಿ ಚಲಿಸಲು ಸಹಾಯಕವಾಗುವಂತೆ ನೋಡಿಕೊಳ್ಳಲು ವಾಹನಗಳ ನಿಲುಗಡೆ ವ್ಯವಸ್ಥೆ ಹಾಗೂ ನಿಷೇಧಗಳನ್ನು ಒಳಗೊಂಡಂತೆ ಮಾರ್ಪಾಡುಗಳನ್ನು ಮಾಡುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶಂಕರ ಬಿದರಿ, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ವಾಹನ ನಿಲುಗಡೆ ವ್ಯವಸ್ಥೆ ಹಾಗೂ ನಿಷೇಧ ಸಂಬಂಧ ಈ ಕೆಳಕಂಡಂತೆ ಆದೇಶಿಸಿರುತ್ತೇನೆ.

**ವಾಹನಗಳ ನಿಲುಗಡೆ ನಿಷೇಧ:**

1. ಸಂಪಿಗೆ ರಸ್ತೆ — ರಾಜೀವ್‌ಗಾಂಧಿ ವೃತ್ತದಿಂದ ಸಂಪಿಗೆ ಚಿತ್ರಮಂದಿರ ಜಂಕ್ಷನ್‌ವರೆಗೆ ರಸ್ತೆಯ ಪಶ್ಚಿಮ ಭಾಗಕ್ಕೆ ಎಲ್ಲಾ ಮಾದರಿಯ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

   ರಾಜೀವ್‌ಗಾಂಧಿ ವೃತ್ತದಿಂದ ಕೃಷ್ಣಭವನ ಕ್ರಾಸ್ ರಸ್ತೆ ಜಂಕ್ಷನ್‌ವರೆಗೆ ಪೂರ್ವ ಭಾಗದಲ್ಲಿ (ಜಂಟಿ ಆಯುಕ್ತರು, ಪಶ್ಚಿಮ ವಲಯ, ಬಿಬಿಎಂಪಿ ಕಛೇರಿಯ ಮುಂಭಾಗದಲ್ಲಿ ಅಂದರೆ ಸೌತ್ ಸೆಂಟ್ರಲ್ ರಸ್ತೆ ಜಂಕ್ಷನ್‌ನಿಂದ 103 ಅಡಿಗಳಷ್ಟು ಸ್ಥಳವನ್ನು ಹೊರತುಪಡಿಸಿ) ಎಲ್ಲಾ ಮಾದರಿಯ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

2. ಸೌತ್ ಸೆಂಟ್ರಲ್ ರಸ್ತೆ: ಸಂಪಿಗೆ ರಸ್ತೆ ಜಂಕ್ಷನ್‌ನಿಂದ ಸಿರೂರ್ ಪಾರ್ಕ್ ರಸ್ತೆ ಜಂಕ್ಷನ್‌ವರೆಗೆ ರಸ್ತೆಯ ಉತ್ತರ ಭಾಗದಲ್ಲಿ ಬಿ.ಬಿ.ಎಂ.ಪಿ. ಕಛೇರಿ, ಶಾಸಕರ ಕಛೇರಿ, ನಗರ ಸಭಾ ಸದಸ್ಯರ ಕಛೇರಿ ಮುಂಭಾಗ 300 ಅಡಿಗಳಷ್ಟು ಸ್ಥಳವನ್ನು ಹೊರತುಪಡಿಸಿ ಉಳಿದ 82 ಅಡಿಗಳಷ್ಟು ಉದ್ದ ಎಲ್ಲಾ ಮಾದರಿಯ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.

**ವಾಹನಗಳ ನಿಲುಗಡೆ ವ್ಯವಸ್ಥೆ:**

1. ಸಂಪಿಗೆ ರಸ್ತೆ: ಸಂಪಿಗೆ ರಸ್ತೆಯಲ್ಲಿರುವ ಜಂಟಿ ಆಯುಕ್ತರು, ಪಶ್ಚಿಮ ವಲಯ, ಬಿ.ಬಿ.ಎಂ.ಪಿ. ಕಛೇರಿಯ ಮುಂಭಾಗದಲ್ಲಿ ಅಂದರೆ ಸೌತ್ ಸೆಂಟ್ರಲ್ ರಸ್ತೆ, ಜಂಕ್ಷನ್‌ನಿಂದ ಕೃಷ್ಣ ಭವನ ಕ್ರಾಸ್ ರಸ್ತೆ ಕಡೆಗೆ 103 ಅಡಿಗಳಷ್ಟು ಸ್ಥಳದಲ್ಲಿ ಕಛೇರಿಯ ಕಾರ್ಯಕರ್ತರ ದ್ವಿಚಕ್ರ ಮತ್ತು ನಾಲ್ಕು ಚಕ್ರದ ವಾಹನಗಳ ನಿಲುಗಡೆಗೆ ಅನುವು ಮಾಡಿಕೊಡಲಾಗಿದೆ.

2. ಸೌತ್ ಸೆಂಟ್ರಲ್ ರಸ್ತೆ: ಸಂಪಿಗೆ ರಸ್ತೆ ಜಂಕ್ಷನ್‌ನಿಂದ ಸಿರೂರ್ ಪಾರ್ಕ್ ರಸ್ತೆ ಜಂಕ್ಷನ್ ವರೆಗೆ ರಸ್ತೆಯ ಉತ್ತರ ಭಾಗದಲ್ಲಿ 300 ಅಡಿಗಳಷ್ಟು ಸ್ಥಳದಲ್ಲಿ ಕಛೇರಿಯ ಕಾರ್ಯಕರ್ತರ ದ್ವಿಚಕ್ರ ಮತ್ತು ನಾಲ್ಕು ಚಕ್ರದ ವಾಹನಗಳ ನಿಲುಗಡೆಗೆ ವ್ಯವಸ್ಥೆ ಕಲ್ಪಿಸಿಕೊಡಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ವಾಹನ ನಿಲುಗಡೆ ವ್ಯವಸ್ಥೆ ಹಾಗೂ ನಿಷೇಧ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ:25.06.2010 ರಿಂದ ಜಾರಿಗೆ ತಂದು ಸೇತುವೆ ದುರಸ್ಥಿ ಕಾಮಗಾರಿ ಮುಗಿಯುವವರೆಗೂ ಜಾರಿಯಲ್ಲಿರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ:25.06.2010ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಶಂಕರ ಬಿದರಿ**

ಪಿ.ಆರ್.1005 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

## ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಉಪಧನ ಪಾವತಿ ಕಾಯ್ದೆಯಡಿ ನಿಯಂತ್ರಣಾಧಿಕಾರಿಯವರ ನ್ಯಾಯಾಲಯ, ಬಳ್ಳಾರಿ ವಿಭಾಗ, ದಾವಣಗೆರೆ

**ಸಂಖ್ಯೆ: ಎಎಲ್‌ಸಿಡಿ/ಪಿಜಿಎ/ಸಿಆರ್–41/2010**

| **ಅರ್ಜಿದಾರರು:** | **ಪ್ರತಿವಾದಿಗಳು** |
|---|---|
| ಶ್ರೀ ಮಂಜುನಾಥ ಹಾಗೂ 3 ಜನ ಮಕ್ಕಳು ಆಂಜನೇಯ ಬಡಾವಣೆ, ಬಾಡಾ ಕ್ರಾಸ್, ತೋಳಹುಣಸೆ, ದಾವಣಗೆರೆ ತಾಲ್ಲೂಕು. | ವ್ಯವಸ್ಥಾಪಕರು, ಶ್ರೀ ಆಂಜನೇಯ ಕಾಟನ್ ಮಿಲ್ಸ್ ಪ್ರೈವೇಟ್ ಲಿ., ಬಾಡಾ ಕ್ರಾಸ್, ತೋಳಹುಣಸೆ, ದಾವಣಗೆರೆ ತಾಲ್ಲೂಕು. |

**ಪ್ರಕಟಣೆ**

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ತಿಳಿಯಪಡಿಸುವುದೇನೆಂದರೆ, ಮೇಲ್ಕಂಡ ಅರ್ಜಿದಾರರು ಈ ಪ್ರಾಧಿಕಾರದ ನ್ಯಾಯಾಲಯದಲ್ಲಿ ದಿನಾಂಕ:15.05.2010ರಂದು ಉಪಧನ ಪಾವತಿ ಕಾಯ್ದೆ–1972 ಹಾಗೂ ಅದರಡಿಯ ಕರ್ನಾಟಕ ನಿಯಮಾವಳಿಗಳು–1973 ರಡಿಯಲ್ಲಿ ಅರ್ಜಿಯನ್ನು ಸಲ್ಲಿಸಿ, ಸದರಿ ಅರ್ಜಿಯಲ್ಲಿ ತಮ್ಮ ಪತ್ನಿ ಶ್ರೀಮತಿ ಭಾಗ್ಯಮ್ಮ ಕೋಂ ಮಂಜುನಾಥ, ಇವರು ಮೇಲ್ಕಂಡ ಪ್ರತಿವಾದಿ ಸಂಸ್ಥೆಯಲ್ಲಿ 13 ವರ್ಷಗಳ ಸೇವೆ ಸಲ್ಲಿಸಿದ್ದು, ನಂತರದಲ್ಲಿ ದಿನಾಂಕ:03.03.2009ರಂದು ಮರಣ ಹೊಂದಿರುತ್ತಾರೆಂದು ತಿಳಿಸಿ, ಪ್ರತಿವಾದಿಗಳಿಂದ ಕಾನೂನು ಪ್ರಕಾರ ಬರಬೇಕಾದ ಉಪಧನವನ್ನು ಕೊಡಿಸಿಕೊಡಬೇಕೆಂದು ಪ್ರಾರ್ಥಿಸಿರುತ್ತಾರೆ.

ಸದರಿ ಪ್ರಕರಣದ ವಿಚಾರಣೆಯು ಈ ನ್ಯಾಯಾಲಯದಲ್ಲಿ ಪ್ರಸಕ್ತದಲ್ಲಿ ನಡೆಯುತ್ತಿದ್ದು, ಈ ಬಗ್ಗೆ ಆದೇಶ ಹೊರಡಿಸಬೇಕಾಗಿರುವುದರಿಂದ, ಮೇಲೆ ಸೂಚಿಸಿರುವ ಪ್ರಕರಣದಲ್ಲಿ ಅರ್ಜಿದಾರರನ್ನು ಹೊರತುಪಡಿಸಿ, ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು/ ಜೀವಂತ ಕುಟುಂಬ ಸದಸ್ಯರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ, ಅಂತಹವರು ಈ ಪ್ರಕಟಣೆಯನ್ನು ರಾಜ್ಯಪತ್ರದಲ್ಲಿ ಪ್ರಕಟಿಸಿದ ಮೂವತ್ತು(30) ದಿನಗಳೊಳಗಾಗಿ ತಮ್ಮ ಲಿಖಿತ ಆಕ್ಷೇಪಣೆಗಳನ್ನು, ಸಕ್ಷಮ ಪ್ರಾಧಿಕಾರದಿಂದ ಪಡೆದ ಸೂಕ್ತ ಮೂಲ ದಾಖಲೆಗಳು ಹಾಗೂ ಇತರೆ ಸಾಕ್ಷ್ಯಾಧಾರಗಳೊಂದಿಗೆ, ಈ ಪ್ರಾಧಿಕಾರದ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಈ ರಾಜ್ಯಪತ್ರದಲ್ಲಿ ವಿಧಿಸಿರುವ ಮೇಲ್ಕಂಡ ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲವೆಂದು ಈ ಮೂಲಕ ಸ್ಪಷ್ಟಪಡಿಸಲಾಗಿದೆ.

**ಡಾ: ಶ್ರೀಪಾದ ಎಸ್.ಬಿ.**

ಸಹಾಯಕ ಕಾರ್ಮಿಕ ಆಯುಕ್ತರು ಮತ್ತು ಉಪಧನ
ಪಾವತಿ ಕಾಯ್ದೆ, ನಿಯಂತ್ರಣಾಧಿಕಾರಿಗಳು,
ಬಳ್ಳಾರಿ ವಿಭಾಗ, ದಾವಣಗೆರೆ.

ಪಿ.ಆರ್.868

**ಕರ್ನಾಟಕ ಸರ್ಕಾರ**

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, IIನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು**

**ಅಧಿಸೂಚನೆ**

**ಸಂ:ಕೃಮಾಇ/226/ನಿಯವಿ/2009, ಬೆಂಗಳೂರು, ದಿನಾಂಕ:3ನೇ ಏಪ್ರಿಲ್, 2010**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ(ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 4ನ್ನು ಓದಿ ಕಲಂ 96ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಅಧಿಸೂಚನೆ ಸಂ:ಸಇ/115/ ಎಂಆರ್ಇ(1)/ 2008(ಭಾಗ), ದಿನಾಂಕ:30–03–2010ರ ಮೂಲಕ ಭತ್ತ ಮತ್ತು ಅಕ್ಕಿ ಉತ್ಪನ್ನಗಳ ವಿಶೇಷ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯನ್ನು ಕಾರಟಗಿ ಯಲ್ಲಿ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಕಾರಟಗಿ, ಕನಕಗಿರಿ, ಸಿದ್ಧಾಪುರ, ಮರಳಿ, ಹುಲಿಹೈದರ್ ಮತ್ತು ನವಲಿ ಹೋಬಳಿಗಳನ್ನು ಒಳಗೊಂಡ ಮಾರುಕಟ್ಟೆ ಪ್ರದೇಶಕ್ಕೆ ಸ್ಥಾಪಿಸಿದೆ.

ಸರ್ಕಾರದ ಅಧಿಸೂಚನೆ ಸಂ:ಸಇ/115/ಎಂಆರ್ಇ/2008(ಭಾಗ), ದಿನಾಂಕ:30–03–2010 ರಲ್ಲಿ ಗಂಗಾವತಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ವ್ಯಾಪ್ತಿಯಲ್ಲಿ ಮಾರಾಟ ನಿಯಂತ್ರಣಕ್ಕೆ ಒಳಪಡಿಸಿರುವ ಕೃಷಿ ಉತ್ಪನ್ನಗಳನ್ನು ಸದರಿ ಅಧಿಸೂಚನೆಯ ಅನುಸೂಚಿ–ಸಿ ಯಲ್ಲಿ ಮತ್ತು ಮಾರುಕಟ್ಟೆ ಕ್ಷೇತ್ರವನ್ನು ಅನುಸೂಚಿ–ಡಿ ಯಲ್ಲಿ ನಿಗದಿಪಡಿಸಲಾಗಿದೆ.

ಮತ್ತು ಆ ಕಾರಣ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ(ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 6(2)ರಲ್ಲಿನ ವಿಧಾನವನ್ನು ಅನುಸರಿಸಿ ಅಧಿಸೂಚನೆ ಸಂ:(1) ಸಿಎಂಪಿ/ಎಂಆರ್ಎಸ್/ಆರ್ಎಂ–1/71–72, ದಿನಾಂಕ:10–09–1971 (2) ಎಂಡಿ/29460/ಆರ್ಎಂ–1/69–70, ದಿನಾಂಕ:29–12–1969, (2) ಕೃಮಾಇ/151/ನಿಯವಿ/ 1991, ದಿನಾಂಕ:30–08–1996, (3) ರಾಮಾಇ/55/ನಿಯವಿ/85, ದಿನಾಂಕ:15–04–1987, (4) ಕೃಮಾಇ/19/ನಿಯವಿ/ 2000, ದಿನಾಂಕ:26/28–06–2000ನ್ನು ಮಾರ್ಪಡಿಸಿ, ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಜಿ.ರಾಮಚಂದ್ರ ಆದ ನಾನು, ಗಂಗಾವತಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟ ಈ ಕೆಳಗೆ ನಮೂದಿಸಿದ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಗಂಗಾವತಿ ನಗರಸಭೆ ಪರಿಮಿತಿಯೊಳಗಿನ ಪ್ರದೇಶವನ್ನು "ಮಾರುಕಟ್ಟೆ" ಎಂದು ಮತ್ತು ಕೆಳಗಿನ ಅನುಸೂಚಿ–ಎ ಯಲ್ಲಿ ನಿರ್ಧಿಷ್ಟಪಡಿಸಿದ ಸ್ಥಳವನ್ನು "ಮಾರುಕಟ್ಟೆ ಪ್ರಾಂಗಣ" ಎಂದು ಹಾಗೂ ಗಂಗಾವತಿ ತಾಲ್ಲೂಕಿನ ಕನಕಗಿರಿ, ಶ್ರೀರಾಮನಗರ, ಸಿದ್ಧಾಪುರ ಗ್ರಾಮಗಳ ಪಂಚಾಯತಿ ಪರಿಮಿತಿಯೊಳಗಿನ ಪ್ರದೇಶವನ್ನು "ಉಪ ಮಾರುಕಟ್ಟೆ" ಗಳೆಂದು ಹಾಗೂ ಅನುಸೂಚಿ–ಬಿ', ಸಿ, 'ಡಿ' ಯಲ್ಲಿ ನಿರ್ಧಿಷ್ಟಪಡಿಸಿದ ಸ್ಥಳಗಳನ್ನು "ಉಪ ಮಾರುಕಟ್ಟೆ ಪ್ರಾಂಗಣ" ಗಳೆಂದು ಮತ್ತು ಕಾರಟಗಿ ಮಾರುಕಟ್ಟೆ ಪ್ರಾಂಗಣವನ್ನು ಸರ್ಕಾರದ ಅಧಿಸೂಚನೆಯಲ್ಲಿ ನಿಗದಿಪಡಿಸಿದ ಉತ್ಪನ್ನಗಳ ಮಾರಾಟದ ಮೇಲ್ವಿಚಾರಣೆಗಾಗಿ ಗಂಗಾವತಿ ಮಾರುಕಟ್ಟೆ ಸಮಿತಿಗೆ ಒಳಪಡುವುದನ್ನು ಅನುಸೂಚಿ–ಇ ನಲ್ಲಿ ಈ ಮೂಲಕ ಘೋಷಿಸಿದ್ದೇನೆ.

**ಕೃಷಿ ಉತ್ಪನ್ನಗಳು**

1. ಜಾನುವಾರುಗಳು, 2. ಮೇಕೆಗಳು, 3. ಕುರಿಗಳು, 4. ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 5. ಎಲ್ಲಾ ಹೂ.ಗಳು, 6. ಸಜ್ಜೆ, 7. ಜವೆ ಗೋಧಿ, 8. ಜೋಳ, 9. ಕಂಬು, 10. ಮೆಕ್ಕೆಜೋಳ, 11. ನವಣೆ, 12. ಭತ್ತ, 13.ರಾಗಿ, 14.ಅಕ್ಕಿ 15.ಸಾಮೆ (ಸಾವೆ), 16.ಗೋಧಿ, 17.ಅಂಟುವಾಳ, 18.ಬೊಂಬು, 19.ಬೆತ್ತ, 20.ಹಿಪ್ಪೆಬೀಜ, 21.ಹೊಂಗೇಬೀಜ, 22.ಬೇವಿನಬೀಜ, 23.ಸೀಗೇಕಾಯಿ, 24.ಹುಣಸೇಹಣ್ಣು, 25.ಹುಣಸೇಬೀಜ, 26.ಸೇಬು, 27.ಬಾಳೆಹಣ್ಣು, 28.ಬೋರೆಹಣ್ಣು, 29.ಹುಳಿಹಣ್ಣುಗಳು, 30.ಚಕ್ಕೋತನ ಹಣ್ಣು, 31.ಪೇರಲೆಹಣ್ಣು (ಸೀಬೆಹಣ್ಣು), 32.ದ್ರಾಕ್ಷಿ, 33.ಹಲಸಿನಹಣ್ಣು, 34.ಜಂಬುನೇರಳೆಹಣ್ಣು, 35.ನಿಂಬೆಹಣ್ಣು, 36.ಕರಬೂಜ, 37.ಮಾವಿನಹಣ್ಣು, 38.ಮೂಸಂಬಿ, 39.ಮರಸೇಬು, 40.ಪೈನಾಪಲ್ (ಅನಾನಸ್), 41.ಪಪ್ಪಾಯಿಹಣ್ಣು (ಪರಂಗಿಹಣ್ಣು), 42.ದಾಳಿಂಬೆಹಣ್ಣು, 43.ಸಪೋಟಾ, 44.ಸಿದ್ದೋಟ, 45.ಕಿತ್ತಳೆ, 46.ಕಲ್ಲಂಗಡಿ, 47.ನೆಲಗಡಲೆ(ಶೇಂಗಾ) (ಕಾಯಿ ಮತ್ತು ಬೀಜ), 48.ಹರಳುಬೀಜ, 49.ಹತ್ತಿಬೀಜ, 50.ಅಗಸೆಬೀಜ, 51.ಸಾಸುವೆ, 52.ಹುಚ್ಚೆಳ್ಳು, 53.ಕುಸುಬೆ, 54.ಎಳ್ಳು, 55.ಸೂರ್ಯಕಾಂತಿಬೀಜ, 56.ಸೋಯಾಬಿನ್, 57.ಅಡಿಕೆ, 58.ಗೋಡಂಬಿಬೀಜ, 59.ಒಣಮೆಣಸಿನಕಾಯಿ, 60.ತೆಂಗಿನಕಾಯಿ, 61.ಕೊಬ್ಬರಿ, 62.ಕೊತ್ತಂಬರಿಬೀಜ (ಧನಿಯಾ), 63.ಬೆಳ್ಳುಳ್ಳಿ, 64.ಶುಂಠಿ, 65.ಮೆಂತ್ಯ, 66.ಕಾಳುಮೆಣಸು, 67.ಅರಿಶಿನ, 68.ಅಲಸಂದೆ(ಇಡೀ ಮತ್ತು ಒಡೆದ), 69.ಅವರೆ (ಇಡೀ ಮತ್ತು ಒಡೆದ), 70.ಕಡಲೆ (ಇಡೀ ಮತ್ತು ಒಡೆದ), 71.ಉದ್ದು (ಇಡೀ ಮತ್ತು ಒಡೆದ), 72.ಬುಲ್ಲರ್ (ಇಡೀ ಮತ್ತು ಒಡೆದ), 73.ಹೆಸರು (ಇಡೀ ಮತ್ತು ಒಡೆದ), 74.ಹುರುಳಿ, 75.ಲಾಕ್ (ಇಡೀ ಮತ್ತು ಒಡೆದ), 76.ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 77.ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 78.ಬಟಾಣಿ, 79.ತೊಗರಿ (ಇಡೀ ಮತ್ತು ಒಡೆದ), 80.ಮೋತ್ (ಇಡೀ ಮತ್ತು ಒಡೆದ), 81.ಎಲ್ಲಾ ತರಕಾರಿಗಳು (ಸೊಪ್ಪುಗಳು ಸೇರಿಸಿ)(ಗರ್ಕಿನ್ ಹೊರತುಪಡಿಸಿ), 82.ಕಾಯಿಗಳು, 83.ಹಸಿರುಮೆಣಸಿನಕಾಯಿ, 84.ಈರುಳ್ಳಿ, 85.ಆಲೂಗಡ್ಡೆ,

